# ಸಖೂಬಾಯಿ



ಅನುವಾದಕರು

**ಶ್ರೀ ಸವಣೂರ ವಾಮನರಾವ ಮಾಸ್ತರರು**

( ವಿಶ್ವಗುಣಾದರ್ಶ ನಾಟಕ ಮಂಡಳಿಯು ಸಂಸ್ಥಾಪಕರು )

ಬೆಲೆ: ೧-೮-೦

# ಮುನ್ನುಡಿ

"ಸಾಧ್ವಿ ಸಖೂಬಾಯಿ" ನಾಟಕವು ಮೂಲದಲ್ಲಿ ಮರಾಠಿಯದು. ಕಳೆದ ಶತಮಾನದ ಕೊನೆಯಲ್ಲಿ ಹುಟ್ಟಿ ಮಹಾರಾಷ್ಟ್ರಕ್ಕೆ ಹೊಸ ಇರವಿನ ಕಲ್ಪನೆಯನ್ನು ಮಾಡಿಕೊಟ್ಟ- ಸುಪ್ರಸಿದ್ಧ ಕಾದಂಬರಿಕಾರರಾದ ದಿವಂಗತ ಹರಿ-ನಾರಾಯಣ ಆಪಟೆಯವರು ಈ ನಾಟಕವನ್ನು ಮರಾಠಿಯಲ್ಲಿ ಬರೆದರು; ಇದನ್ನೇ ದಿವಂಗತ ಶ್ರೀ ವಾಮನರಾವ ಮಾಸ್ತರರು ಕನ್ನಡಕ್ಕೆ ತಂದು ತಮ್ಮದೇ ಆದ ಮಂಡಲದವರಿಂದ ಒಳ್ಳೇ ಯಶಸ್ವಿಯಾಗಿ ಪ್ರಯೋಗಿಸಿದರು.

ವಿಶ್ವಗುಣಾದರ್ಶನಾಟಕ ಕಂಪನಿಯವರ ಕಳೆಕಟ್ಟಿದ ನಾಟಕಗಳಲ್ಲಿ ಇದೊಂದು. ಕೆಲವು ಕಾಲ ಈ ನಾಟಕದ ಹಾಡುಗಳು- ಮತ್ತು ಮಾಧವನ ಪಾತ್ರದ ಅಭಿನಯ- ನಮ್ಮ ರಸಿಕರ ವಿಮರ್ಶೆಯ ಮಾತಾಗಿತ್ತು.

ಮುಖ್ಯವಾಗಿ ಭಕ್ತಿರಸದ ಆವಿಷ್ಕಾರ, ನಾಟಕ ರಚನೆಯ ತಂತ್ರದ ಸುಲಭತೆ, ಇವೇ ಈ ನಾಟಕದ ಮುಖ್ಯಗುಣ; ಪದ್ಯಗಳಲ್ಲಿಯ- ಕಾವ್ಯಗುಣ- ಇನ್ನೊಂದು ಇಲ್ಲಿಯ ಗುಣವೆಂದು ಹೇಳಬೇಕು.

ವೈ. ವಾಮನರಾವ ಮಾಸ್ತರರ ಉಳಿದ ನಾಟಕಗಳನ್ನು ಉತ್ಸಾಹದಿಂದ ನಮ್ಮ ರಸಿಕರು ಬರಮಾಡಿಕೊಂಡಂತೆ ಇದನ್ನು ಬರಮಾಡಿಕೊಳ್ಳುವರೆಂದು- ಪೂರ್ತಿಯಾಗಿ ನಂಬಿದ್ದೇನೆ—

ಧಾರವಾಡ
೧೫-೧೨-೪೭

ವೆಂ. ವಾ. ಸವಣೂರ

# ವೈ. ವಾಮನರಾವ ಮಾಸ್ತರರ ಇತರ ನಾಟಕಗಳು.

**ಕೃಷ್ಣಾರ್ಜುನರ ಯುದ್ಧ—** ೧—೮—೦

ಇದೊಂದು ಪೌರಾಣಿಕ ನಾಟಕ. ವಸ್ತುವು ಪೌರಾಣಿಕವಿದ್ದರೂ ನಾಟಕದ ರಚನೆ ಕೇವಲ ವಾಸ್ತವತೆಯ ಚಿತ್ರಣದಂತೆ ಕಾಣುವಷ್ಟು- ಸಹಜ ರಮ್ಯವಾಗಿದೆ; ತಿಳಿಹಾಸ್ಯದ ಪರಿಳಿತವು ವ್ಯಕ್ತವಾಗುತ್ತದೆ. ಶ್ರೀಕೃಷ್ಣ ಹಾಗೂ ಅರ್ಜುನರ ನಡುವೆ ನಾರದರ ಕೈಚಳಕದಿಂದ ಬಂದೊದ್ದುವ ಆಕಸ್ಮಿಕ ಘಟನೆಯೇ ಈ ನಾಟಕದ ಸಾರ; ಭಾರತದಲ್ಲಿಯ ಗಾಲವೋಪಾಖ್ಯಾನ ಇದರ ತಳಹದಿ—

**೨ನೇ ಬಾಜೀರಾವ ಪೇಶವೆ—** ೧—೮—೦

ಭಾರತದ ಪಾರತಂತ್ರ್ಯದ ಕಾರಣನಾದ ೨ನೇ ಬಾಜೀರಾಯನ ಜೀವನ ಚಿತ್ರಣವನ್ನಿಲ್ಲಿ ನೋಡಬಹುದು. ಮೂಲಕಥೆಯ ಹಿನ್ನೆಲೆಯಾಗಿ- ಸಮರಧುರಂಧರನಾದ ಬಾಪು ಗೋಖಲೆಯ ಸ್ವದೇಶಪ್ರೇಮ- ಸ್ವಾಮಿನಿಷ್ಠೆ, ಕರ್ತವ್ಯ ಪರಿಪಾಲನೆ- ಇವೆ ಮುಂತಾದ ಉಜ್ವಲಗುಣಗಳ ಪರಿಸ್ಫುಟತೆಯಾಗುತ್ತದೆ. ಅಲ್ಲಲ್ಲಿ ಆ ಪರಿಸ್ಥಿತಿಯ ಮೇಲಣ ವಿಚಾರಗಳೂ ವ್ಯಕ್ತವಾಗುವ ಮಾತುಗಳು ಉದ್ಬೋಧಕವಾಗಿರುತ್ತವೆ.

**ಸಾಧ್ವೀ ಸಖೂಬಾಯಿ—** ೧—೮—೦

ಪಾಂಡುರಂಗನ ಅನನ್ಯಭಕ್ತಳ ಧ್ಯೇಯಸಿದ್ಧಿಯೇ ಈ ನಾಟಕದ ವಸ್ತುವು. ತಾಯನ್ನೂ ಬಿಡಲಾರ ಇತ್ತ ಹೆಂಡತಿಯನ್ನೂ ಬಿಡಲಾರದಂತಹ ವಿಚಿತ್ರವ್ಯಕ್ತಿ ಮಾಧವ. ದೇವರನ್ನು ಬಿಡುಗಡೆ ಮಾಡಲು ಶ್ರೀ ರುಕ್ಮಿಣಿದೇವಿಯ ಗಡಿಬಿಡಿ ಇವೆಲ್ಲ ಇಲ್ಲಿ ವ್ಯಕ್ತವಾಗಿವೆ. ಹಾಡುಗಳು ಭಕ್ತಿರಸದಿಂದ ತುಂಬಿವೆ.

**ಭಕ್ತ ಪ್ರಲ್ಹಾದ—** ೧—೮—೦

ಚಿರಪರಿಚಿತವಾದ ಕಥಾವಸ್ತುವಿದು. ಭಾಗವತ ಶ್ರೇಷ್ಠನಾದ ಪ್ರಲ್ಹಾದನು- ಭಕ್ತಿಯ ಮಹಿಮೆಯಿಂದ ಅಪಾರ ಕಷ್ಟಗಳನ್ನು ದಾಟಿ ಕೊನೆಗೆ ಮುಕ್ತಿಯಾದ ವಿಷಯವನ್ನು ವಾಚಕರು ಅನುಭವಿಸಬೇಕು; ಭಕ್ತಿಪೂರ್ಣವಾದ ಗಾನಗಳನ್ನು ನುಡಿಯಬೇಕು—

—ಶ್ರೀ. ಗುರುರಾಜೋ ವಿಜಯತೇ—

# ಸಾಧ್ವೀ ಸಖೂಬಾಯಿ.

## ೧ ನೇ ಅಂಕ.

### ೧ ನೇ ಪ್ರವೇಶ

(ಸ್ಥಳ— ಕರ್ಹಾಡಗ್ರಾಮ ಕೃಷ್ಣಾನದಿಯ ತೀರ. ಹತ್ತಿರವಿದ್ದ ಪಾಂಡುರಂಗ ದೇವಸ್ಥಾನದ ಸಮೀಪದಲ್ಲಿ ಬಾಲಿಕೆಯರು ದೇವತಾಸ್ತೋತ್ರ ಮಾಡುತ್ತಿದ್ದಾರೆ.)

**ಈಶಸ್ತವನ.**

ರಾಗ ಹಮೀರ, ತಾಳ ತ್ರಿವಟ.

**ನಮಿಪೆ ಸಿರಿವರಾ ಜಗದೋದ್ಧಾರಾ। ಸುಮನೋಹಾರಾ ಶ್ಯಾಮಲಗಾತ್ರಾ ॥ ೧ ॥ ಕುರುಸಭೆಯೊಳಗಾ। ವರ ಪಾಂಚಾಲಿಯು। ಸ್ಮರಿಸಲು ವೇಗದಿ ನೆರೆಪೊರೆದವನೆ ॥ ೨ ॥ ಸಲೆಕರಿರಾಜನ। ಕಳವಳ ಭಾವಕೆ। ಒಲಿದು ನೀ ಬಂದೆ। ನಲಿದು ಸಲಹಿದೆ ॥ ೩ ॥ ಇಂತಹ ಮಹಿಮಾ। ತ್ಯಂತಗುಣಗಳ। ಸಂತತ ಸ್ಮರಿಪೆ ಮಧ್ವೇಶಾ ॥ ೪ ॥**

(ಹಾಡು ಮುಗಿದೊಡನೆ ಬಾಲಿಕೆಯರು ಹೋಗುವರು. ಇನ್ನೊಂದು ಬದಿಯಿಂದ ಕಾವೇರಿ. ಅನುಸೂಯಾ- ಪದ್ಮಾವತಿಯರು ಬರುವರು.)

**ಅನುಸೂಯಾ**— ಛೀ ತಾಯಿ, ಜನ ಬೇಕಾದ್ದು ಅನ್ನಲಿ; ನಾನಂತೂ ಇಂಥ ಅತ್ತೆಯ ಮನೆಯನ್ನು ಎಲ್ಲಿಯೂ ನೋಡಿಲ್ಲ- ಬಿಡು !

**ಕಾವೇರಿ**— ಏನೇ ಅವಳು ಅತ್ತೆಯೇ ಅಲ್ಲ; ಪೂರ್ವ ಜನ್ಮದ ವೈರಿಯು. ನಾನೇ ಅಂತಹ ಸ್ಥಿತಿಯಲ್ಲಿದ್ದರೆ, ಏನು ಮಾಡುತ್ತಿದ್ದೆ, ಅದನ್ನು ಹೇಳಲೇ ನಿನಗೆ—

**ಅನುಸೂಯಾ**— ಹೇಳು. ಹೇಳು- ಕೇಳಿಯಾದರೂ ಕೇಳೋಣ—

**ಕಾವೇರಿ**— ಸಖೂದೇವಿ- ಒಳ್ಳೆಯವಳೆಂದು- ಇಷ್ಟು ಕಷ್ಟವನ್ನು ಅನುಭವಿಸುವಳು. ಅದೇ ನಾನೇ ಆಗಿದ್ದರೆ, ಎಂದೂ ಭಾಂವಿ ಹಾರಿಕೊಳ್ಳುತ್ತಿದ್ದೆ; ಇಲ್ಲ—**ಎಲ್ಲಿ**ಯಾದರೂ ಓಡಿಹೋಗುತ್ತಿದ್ದೆ !

**ಪದ್ಮಾವ**ತಿ— ಅಹಹಾ-ಎಂಥಾ ಬುದಿ ಯವನ್ನು ನಿಮ್ಮದು ! ಅಂತೆ ಆತ್ಮಹತ್ಯ ಮಾಡಿಕೊಳ್ಳುತ್ತಿದ್ದೆ : ಓಡಿ ಹೋಗುತ್ತಿದ್ದೆ; ಆತ್ಮಹತ್ಯೆ ಮಾಡಿಕೊಳ್ಳುವದೇನು ಅಂಗೈಯಲ್ಲಿಯ ನೆಲ್ಲಿಕಾಯಿಯೆಂದು ತಿಳಿದಿಯಾ-? ಆದರೆ ಒಂದು ಮಾತ್ರ ಸತ್ಯ. ಅದು ಏನಂದರೆ— ಓಡಿಹೋಗುವ ವಿದ್ಯೆಯಲ್ಲಿ ಮಾತ್ರ ನೀನು-ಪಾರಂಗತಳು.

**ಕಾವೇರಿ**— ಮತ್ತೆ ನಿನ್ನದೇನು ಓಡಿಹೋಗುವ ವಿದ್ಯೆಯಲ್ಲಿ ನೀನು ಶಿಖರವನ್ನೇ ಇಟ್ಟಿರುವಿ. ಮದುವೆಯಾದಂದಿನಿಂದ ನೀನು ಅತ್ತೆಯ ಮನೆಯಿಂದ ಕನಿಷ್ಠ, ನಾಲ್ಕಾರು ಸಲ ಓಡಿಬಂದಿರಬಹುದು. ಚಿಕ್ಕಂದಿನಲ್ಲಿ ನಮಗೆ ತವರುಮನೆಯೆಂದರೆ ಸ್ವರ್ಗ; ಅತ್ತೆಮನೆಯೆಂದರೆ ಒಂದು ಘೋರ ನರಕದಂತೆ ತೋರುವದು. ಸ್ವಂತವೂರಲ್ಲಿಯೆ ಅತ್ತೆಮನೆಯಿದ್ದರಂತೂ ತೀರಿಯೇ ಹೋಯಿತು. ಕಣ್ಣುತಪ್ಪಿಸಿ-ಹೂ—

**ಪದ್ಮಾವತಿ**— ಏನೇ ಅನುಸೂಯಾ- ಕಾವೇರಿ- ಸಖೂದೇವಿಯು ಗೆಳತಿಯರು ನೀವು; ನಾನು ಅವಳ ಅತ್ತಿಗೆಯು; ನಿಮ್ಮಕ್ಕಿಂತಲೂ ನನಗೆ ಅವಳಬಗ್ಗೆ ಕನಿಕರವೆನಿಸುವದು; ಆದರೆ ಏನು ಮಾಡುವದು, ಸಖೂದೇವಿಯ ಅಂಗದಲ್ಲಿ- ಅತ್ತೆ ಮಾವಂದಿರನ್ನು ಒಲಿಸಿಕೊಳ್ಳುವ ಗುಣವೇ ಇಲ್ಲ; ಅದಕ್ಕೇನು ಮಾಡುವದು? ಬೆಳಗಿನಿಂದ ಸಾಯಂಕಾಲದ ವರೆಗೆ ವಿಠ್ಠಲನ ಧ್ಯಾನವೇ ಧ್ಯಾನ; ನೋಡಿದರೆ ತಾನಿನ್ನೂ ಚಿಕ್ಕವಳು; ಈಗಲೇ ತನಗೇಕೆ ಬೇಕಿದ್ದೀತು ವಿಠ್ಠಲನ ನಾಮಸ್ಮರಣೆ. ಇವಳೇನು ಆ ಪುಂಡಲೀಕ-ಪಲ್ಹಾದರಂತೆ ಭಕ್ತ ಶ್ರೇಷ್ಠರಾಗತಕ್ಕವಳೆ? ಮಾವನಿಗ ಸ್ನಾನಕ್ಕೆ ನೀರು ಕೊಡುವಾಗ ವಿಠ್ಠಲ ಧ್ಯಾನ; ಪತಿಯು ಪ್ರೇಮಕ್ಕೆ ವಶನಾಗಿ ಸಮೀಪ ಕರೆದರೆ ವಿಠ್ಠಲ ಧ್ಯಾನ; ಪಾಪ ಆ ಗಂಡ ಏನು ಮಾಡಬೇಕು? ಇವಳಿಗೆ ೧೮-೨೦ ವರುಷ; ಅವನಿಗೆ ಇಪ್ಪತ್ತೈದು

ವರುಷ; ತರುಣ ಯುವಕ; ಇವಳು ಹೀಗೆ "ರಾಮಕೃಷ್ಣ ಹರಿ," "ರಾಮಕೃಷ್ಣ ಹರಿ" ಎಂದು ಭಜನೆಯನ್ನು ಪ್ರಾರಂಭಿಸಿದರೆ-ಅವನ ಗತಿ ಏನು? ನಾಲ್ಕು ಜನರಂತೆ ಇವಳೂ ಅತ್ತೆಯ ಮನೆಯಲ್ಲಿ ವರ್ತಿಸಿದರೆ, ಇವಳಿಗೇಕೆ ಕಷ್ಟವಾಗುವದು.?

**ಅನುಸೂಯಾ**—ಪದ್ಮಾವತೀ ನೀನು ಬೇಕಾದ್ದು ಅನ್ನು- ನಿಮ್ಮ ಚಂಡಿಕಾಬಾಯಿ ಮತ್ತು ಮಾಧವರಾಯರು ಒಳ್ಳೆಯವರಲ್ಲ ಬಿಡು. ಅವಳನ್ನು ಕಾಡುವದಾದರೂ ಅದೆಷ್ಟು- ಅದಕ್ಕೇನು ಪರಿಮಿತಿಯೇ ಇಲ್ಲವೋ, ಹೇಗೆ? ಅತ್ತೆ ಮಾವಂದಿರ ಕೂಡ- ಪತಿಯ ಕೂಡ-ಹೇಗೆ ವರ್ತಿಸಬೇಕೆಂಬ ಬುದ್ಧಿಯು- ಸಖೂಬಾಯಿಗೆ ಇಲ್ಲವೆಂದು ಹೇಳುವೆ; ಆದರೆ ನಾನು ಕೇಳುತ್ತೇನೆ- ಆ ಬುದ್ಧಿಯು ನಿನಗಿರುವದೇನು? ನಿನಗೇ ಆ ಬುದ್ಧಿಯಿದ್ದರೆ, ನಿನ್ನ ಪತಿಯು ಆ ಸೂಳೆಯ ಸಹವಾಸದಲ್ಲಿ ಏಕೆ ಇರುತಿದ್ದ?

**ಪದ್ಮಾವತಿ**—ಅದು ನನ್ನ ಪ್ರಾರಬ್ಧ; ಅದಕ್ಕೆ ಬೇರೆ ಕಾರಣವಿಲ್ಲ; ಆದರೆ ಸಖೂಬಾಯಿಯ ಪತಿಯು ಅಂಥವನಲ್ಲ. ಯಾವ ದುರ್ವ್ಯಸನವೂ ಅವನಿಗಿಲ್ಲ. ಸಖೂದೇವಿಯು ಸ್ವಲ್ಪ ಜಾಣತನದಿಂದ ಅವನ ಮನವನ್ನೊಲಿಸಿದರೆ, ಅವನು ಇವಳ ಕೇವಲ ದಾಸನಾಗುವನು.

**ಕಾವೇರಿ**—ಅಮ್ಮಾ ಪೂರ್ವಜನ್ಮದ ಫಲವೇ ಅದಕ್ಕೆ ಕಾರಣ- ಆದರೆ ನನಗಂತೂ ಸಖೂದೇವಿಯ ಈಗಿನ ಸ್ಥಿತಿಯನ್ನು ನೋಡಿ ಮನಸ್ಸಿಗೆ ಬಹಳ ವ್ಯಾಕುಲವಾಗುತ್ತದೆ. ಒಂದು ಸಲ ಚಂಡಿಕಾಬಾಯಿಯವರನ್ನು ಕಂಡು ಈ ಸಂಬಂಧದಲ್ಲಿ ಚನ್ನಾಗಿ ಮಾತಾಡಬೇಕಾಗಿದೆ; ಅದೂ ಅಲ್ಲದೆ ನಮ್ಮ ಮನೆಯವರೂ ಮಾಧವರಾಯರೂ- ಕೂಡಿ ಆಡಿದವರು,- ಸಾಲೆ ಕಲಿತವರು, ಇವರಿಗೆ ತಿಳಿಸಿ ಮಾಧವರಾಯರಿಗೆ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿರೆಂದು- ಕೇಳುತ್ತೇನೆ; ಆದರೆ ಯಾರಿಗೆ ಗೊತ್ತು. ಇದೆಲ್ಲ ವ್ಯರ್ಥವಾಗಿ,- ಸ್ನೇಹದಲ್ಲಿ ಮಾತ್ರ ವ್ಯತ್ಯಾಸ ಬಂದರೆ—

**ಅನುಸೂಯಾ**—ನಾನು ಕೂಡ ನಿನ್ನಂತೆ ಯೋಚನೆಮಾಡಿ- ನಮ್ಮ

ಮನೆಯವರ ಮುಂದೆ ಈ ವಿಷಯವನ್ನು ಪ್ರಸ್ತಾಪಿಸಿದೆ; ಆದರೆ ಏನು? ದಿನದ ಉತ್ತರವೇ ಅದಕ್ಕೆ ಬಂದಿತು.

**ಕಾವೇರಿ**— ಅದೇನೆಂದು--?

**ಅನುಸೂಯಾ**—"ನೀವು ಹೆಂಗಸರು; ನಿಮಗೆ ತಿಳಿಯುವದಿಲ್ಲ" ಎಂದು.

**ಕಾವೇರಿ**—ಅದು ಹೋಗಲಿ. ಅನುಸೂಯಾ— ಈ ಸಖೂದೇವಿಗೆ ಆ ವಿಠ್ಠಲನ ಭಜನೆಯ ಹುಚ್ಚು ಹತ್ತುವದಕ್ಕೆ ಏನು ಕಾರಣವಿದ್ದೀತು?

**ಅನುಸೂಯಾ**—ಅದಕ್ಕೇನು ಕಾರಣವಾಯಿತೆಂಬುದು ನಿನಗೆ ಗೊತ್ತಿಲ್ಲವೇನು? ಪ್ರತಿವರುಷ ಸಖೂದೇವಿಯ ತಾಯಿ ತಂದೆಗಳು ಪಂಢರಪುರಕ್ಕೆ ಹೋಗುತ್ತಿದ್ದರು. ಶ್ರೀ ವಿಠ್ಠಲನು ಅವರ ಆರಾಧ್ಯ ದೇವತೆಯು. ಅವರಿಗೆ ಈ ಸಖೂದೇವಿಯು ಒಬ್ಬಳೇ ಮಗಳು. ವೃದ್ಧಾಪ್ಯಬಂದ ಕೂಡಲೆ ತಮ್ಮ ಹತ್ತಿರವಿದ್ದ ಚೂರುಚಾರು ಹಣವನ್ನು ಆಸ್ತಿಯನ್ನು ;ಈ ಗದಾಧರ ಪಂತರಿಗೊಪ್ಪಿಸಿ-ಸಖೂದೇವಿಯನ್ನು ಮಾಧವರಾಯರಿಗೆ ಧಾರೆ ಎರೆದುಕೊಟ್ಟರು. ದುಡ್ಡಿನ ಮೋರೆ ನೋಡಿದಕೂಡಲೇ ಇವರ ಬಾಯಲ್ಲೂ ನೀರೂರಿದವು. ಉಭಯತರೂ ಒಪ್ಪಿದರು—

**ಕಾವೇರಿ**—ಅದು ಹಾಗೇ ಇರಬೇಕು. ಇವರು ಇಂಥವರೆಂದು ಆಗ ಅವರಿಗೆ ಹೇಗೆ ಗೊತ್ತಾಗಬೇಕು?

**ಅನುಸೂಯಾ**—ಸಖೂದೇವಿಯ ತಾಯಿತಂದೆಗಳು ಕೇವಲ ಸಜ್ಜನರು. ಅವರಿಗೆ ಈ ಪ್ರಪಂಚದಲ್ಲಿ ಕೆಟ್ಟವರೇ ಕಾಣುತ್ತಿರಲಿಲ್ಲ. ನಮ್ಮ ತಾಯಿಯು ಅವರ ಕಥೆಯನ್ನೆಲ್ಲ ಹೇಳುತ್ತಿದ್ದಳು; ದೇವತಾ ಮನುಷ್ಯರೆ ಎಂದು ಅವಳು ಅನ್ನುತ್ತಿದ್ದಳು. ಸಖೂದೇವಿಯ ಮದುವೆಯಾದ ಮರುತಿಂಗಳಿಗೇ- ಅವರು ಪಂಢರಪುರದ ಯಾತ್ರೆಗೆ ಹೋದರು- ಮುಂದೆ ಸಲ್ಪೇ ದಿನಗಳಲ್ಲಿ ಆ ದಂಪತಿಗಳು ವೈಕುಂಠಯಾತ್ರೆಯನ್ನೇ ಮಾಡಿದರು. ಪಾಪ- ಸಖೂದೇವಿಯು ಮಾತ್ರ ನಿರಾಧಾರಿಯಾದಳು. ದುಃಖ ಹೆಚ್ಚಾಯಿತು. ಪಂಢರಪುರಕೆ ಹೋದರೆ ತನ್ನ ತಾಯಿ ತಂದೆಯನ್ನು ನೋಡಿಯೇನೆಂಬ

ಆಸೆ ಬಲವಾಯಿತು. ಆಗಿನಿಂದ ಪಾಂಡುರಂಗನ ಭಜನೆಯನ್ನು ಪ್ರಾರಂಭಿಸಿದಳು; ಅದೀಗ ಹೆಚ್ಚಾಗಿದೆ.

**ಕಾವೇರಿ**—ಯಾಕೆ ಪದ್ಮಾವತಿಬಾಯೀ- ಮಾತಾಡಲೊಲ್ಲಿರಿ- ?

**ಅನುಸೂಯಾ**—ಅವಳು ಮಾಡುತ್ತಿರುವ ಭಜನೆಯು ಚಂಡಿಕಾಬಾಯಿಯವರ ಮನಸ್ಸಿಗೆ ಬರುವದಿಲ್ಲ. ಅದನ್ನು ಅವರು ಹುಚ್ಚು ಎಂದು ಅನ್ನುತ್ತಾರೆ; ಹಟ ಎಂದು ಅನ್ನುತ್ತಾರೆ; ಅದಕ್ಕೆ ಶಾಸನವೆಂದು ಅವಳ ಛಲನೆಯನ್ನೇ ಪ್ರಾರಂಭಿಸಿದರು. ಅಷ್ಟೇ ಅಲ್ಲ ನಾಳೀ ಮಕ್ಕಳು ಜನಿಸಿದರೆ ಅವು ಕೂಡ ಎಲ್ಲಿ ಇವಳಂತೆ ಹುಚ್ಚಾಗುವವೋ ಎಂದು ಪತಿಯು ಸಹವಾಸವನ್ನು ಮಾಡಗೊಡುವದಿಲ್ಲ. ಈ ಎಲ್ಲ ಕಷ್ಟಗಳೂ ತನ್ನವಲ್ಲವೆಂದು ತಿಳಿದು ಸಖೂದೇವಿಯು ಯಾವಾಗಲೂ ದೇವರ ಧ್ಯಾನದಲ್ಲಿ ಮುಳುಗಿ ತನ್ನ ಮನೆಗೆಲಸದಲ್ಲಿ ತೊಡಗುವಳು; ಯಾರ ಮುಂದೂ ಒಂದು ಮಾತು ಆಡುವದಿಲ್ಲ.

**ಕಾವೇರಿ**—ಹೌದು- ನನ್ನದೂ ಅವಳದೂ ಇಷ್ಟು ಗೆಳೆತನ; ಆದರೆ ಒಂದು ದಿನ ಕೂಡ ತನ್ನ ಅತ್ತೆಯನ್ನಾಗಲೀ ಪತಿಯನ್ನಾಗಲೀ ಆಡಿಕೊಂಡಿಲ್ಲ. ದೈನ್ಯತುಂಬಿದ ಅವಳ ಮುಖವನ್ನು ನೋಡಿ ನಾವೇ ಏನಾದರೂ ಕೇಳಿದರೆ, ಅದಕ್ಕೆ ಏನಾದರೂ ಸಮಾಧಾನ ಹೇಳುತ್ತಾಳೆ. ಭಗವದ್ಭಕ್ತರ ಉದಾಹರಣೆಯನ್ನು ಹೇಳಿ, ನಮ್ಮನ್ನು ಸಂತೋಷಿಸುತ್ತಾಳೆ

**ಪದ್ಮಾವತಿ**—(ಜುಚ್ಚಿ) ಅವಳು ಭಗವದ್ಭಕ್ತರ ಕತೆಗಳನ್ನು ಹೇಳುತ್ತ ತಾಳ ಬಾರಿಸುತ್ತಾಳೆ, ನೀವೇಕೆ ಅವಳಂತೆ ತಾಳ ಕುಟ್ಟುವದಿಲ್ಲ ?—

**ಅನುಸೂಯಾ**—ಅಮ್ಮಾ ಅವಳಂತೆ ನಮಗೂ ಬುದ್ಧಿ ಬರಬೇಕಾದರೆ ಪೂರ್ವಜನ್ಮದ ಸುಕೃತಬೇಕು; ಸುಮ್ಮನೇ ಎಲ್ಲರಿಗೂ ಹೇಗೆ ಬಂದೀತು- ಆ ಮನಸ್ಸು. ಅವಳಂತೆ ನಾವು ಭಜನೆ ಮಾಡುವದಿಲ್ಲ; ಆದರೆ ನಿನ್ನಂತೆ ಅವಳ ನಿಂದೆಯನ್ನೂ ಮಾಡುವದಿಲ್ಲ. ಅವಳ ಸಮಾಧಾನ ಗುಣವನ್ನು ಎಷ್ಟು ಕೊಂಡಾಡಿದರೂ ಕಡಮೆಯೇ ಸರಿ. ಅವಳ ತಾಯಿಯು ಪಂಢರಪುರದಿಂದ ಅವಳಿಗೊಂದು

ಚಂದನದ ವಿಠ್ಠಲನ ಪ್ರತಿಮೆಯನ್ನು ತಂದುಕೊಟ್ಟಿದ್ದಳು. ದಿನಾಲು ಅದನ್ನು-ಸಖೂದೇವಿಯು ಭಕ್ತಿಯಿಂದ ಪೂಜಿಸುತ್ತಿದ್ದಳು. ಚಂಡಿಕಾಬಾಯಿಗೆ ಅದನ್ನು ನೋಡಿ ಸಹನವಾಗದೆ, ಕನಿಷ್ಠ ನೂರು ಸಲವಾದರೂ ಅದನ್ನು ಹೊರಗೆ ಬಿಸಾಕಿರಬಹುದು; ಆದರೆ ಸಖೂಬಾಯಿಯು ಅದನ್ನು ಇದ್ದಲ್ಲಿಂದ ಹುಡುಕಿತಂದು, ಅದನ್ನಿಟ್ಟು ಭಜನೆ ಮಾಡಿದಳು. ನೋಡು-ಒಂದು ದಿವಸವಂತೂ ಚಂಡಿಕಾದೇವಿಯವರು ಅದನ್ನು ಬೆಂಕಿಯಲ್ಲಿ ಚಲ್ಲಿದ್ದರು, ಜೀವದ ಪರಿವೇ ಇಲ್ಲದೇ ಅದನ್ನು ಸಖೂದೇವಿಯು ಒಲೆಯಲ್ಲಿ ಕೈಹಾಕಿ ಹೊರಕ್ಕೆ ತೆಗೆದಳು; ಕೈಸುಟ್ಟಿತೆಂದು ಸ್ವಲ್ಪ ಕೂಡ ಒದ್ದಾಡದೇ ದೇವರ ಧ್ಯಾನದಲ್ಲಿ ತನ್ಮಯಳಾದಳು.

**ಕಾವೇರಿ**—ಪದ್ಮಾವತೀ, ಸಖೂದೇವಿಯು ಏಕಾಂತದಲ್ಲಿ ಆದರೊಡನೆ ಭಕ್ತಿಭಾವದಿಂದ ಆಡುವದನ್ನು ನೀನು ನೋಡಿರಲಿಕ್ಕಿಲ್ಲ; ಆ ಮೂರ್ತಿಗೆ ಎರೆಯುಹಾಕುತ್ತಾಳೆ; ತೊಟ್ಟಿಲಲ್ಲಿಟ್ಟು ಜೋಗುಳ ಹಾಡುತ್ತಾಳೆ; ಆಗ-ಭಕ್ತಿಪರವಶತೆಯಿಂದ ಅವಳ ಕಣ್ಣುಗಳಲ್ಲಿ ನೀರು ಸುರಿಯುತ್ತಿರುತ್ತವೆ.

**ಪದ್ಮಾವತಿ**—ನಾನು ಎಲ್ಲವನ್ನೂ ನೋಡಿರುವೆನು: ಆದರೆ ನಿಮ್ಮಂತೆ ಹಾಳು ಸ್ತುತಿಯನ್ನು ಮಾತ್ರ ಮಾಡುವದಿಲ್ಲ. ಅವಳ ಈ ಹುಚ್ಚುತನವನ್ನು ನೋಡಿ ಅವಳ ಪತಿಯು ಶಿಕ್ಷಿಸದೇ, ಅವಳನ್ನೇನು, ಮಣೆಯ ಮೇಲೆ ಕೂಡ್ರಿಸಿ ಪೂಜಿಸಬೇಕೆ? ನೀವೆನಮ್ಮಾ ಹೆಚ್ಚಿನವರು. ವರ್ಣನೆ ಮಾಡುವದೊಂದೇ ಕೆಲಸ. ನೀವೂ ಅವಳಂತೆ ನಿಮ್ಮ ಮನೆಯಲ್ಲಿ ಮಾಡಿನೋಡಿರಿ; ಆಗ ಬರುವ ಅನುಭವವನ್ನು ನೋಡಿರಿ! ಏನೇ ಕಾವೇರೀ- ಈ ದಿನ ರಾತ್ರಿ ನೀನು ಶಯ್ಯಾಗಾರಕ್ಕೆ ಹೋದಾಗ- ಪತಿಯ ಸಮೀಪಕ್ಕೆ ಹೋಗದೇ ವಿಠ್ಠಲನ ಭಜನೆಯನ್ನು ಪ್ರಾರಂಭಿಸು, ಅಂದರೆ ನೋಡು ವಿಠ್ಠಲನ ಪ್ರಸಾದ ತಾನೇ ದೊರಕುವದು.

**ಕಾವೇರಿ**—ಪದ್ಮಾವತೀ ನೀನಂತೂ ತೀರ ಮರ್ಯಾದೆಯನ್ನೇ ಬಿಟ್ಟು ಬಿಟ್ಟೆ. ಸತ್ಯವಾಗಿ ನೀನು ಹೇಳು. ಪತಿಯ ಸಮೀಪದಲ್ಲಿರುವಾಗ

ಸಖೂದೇವಿಯು- ವಿಠ್ಠಲನ ಭಜನೆ ಮಾಡಿದ್ದನ್ನು ನೀನು ಎಂದಾದರೂ ನೋಡಿದ್ದೀಯಾ ?

**ಪದ್ಮಾವತಿ**—ತಾಳಬಾರಿಸುತ್ತ ಹಾಡುತ್ತ ಕುಳಿತರೇ—ಭಜನೆಯೆಂದು ನೀವು ಅನ್ನುತ್ತಿದ್ದರೆ- ಅದಕ್ಕೆ ನನ್ನ ಪ್ರತಿ ಉತ್ತರವಿಲ್ಲ. ವಯಸ್ಸಿಗೆ ಬಂದ ಹುಡುಗೆಯರು- ಸ್ವಲ್ಪ ನಟಿಸಿಕೊಂಡು ಬೆಡಗು ಬಿನ್ನಾಣ ತೋರಿಸಬೇಕು; ಪತಿಯನ್ನ ಕಂಡೊಡನೆ ಮುಗುಳು ನಗೆಯಿಂದ ಸ್ವಾಗತಿಸಬೇಕು; ಏಕಾಂತ ಕೇಳಿಗೆ ಮನ ಸೆಳೆಯುವಂತೆ- ಅವನಿಗೆ ಆವಿರ್ಭಾವ ತೋರಿಸಬೇಕು; ಅದನ್ನೆಲ್ಲ ಬಿಟ್ಟು "ರಾಮಕೃಷ್ಣ ಹರಿ"-"ರಾಮಕೃಷ್ಣ ಹರಿ" ಎಂದು ಕಾಲಕಳೆಯ ಹತ್ತಿದರೆ- ಆ ಪತಿಯು ಏನು ಮಾಡಬೇಕು? ಹೀಗೆ ಮಾಡುವದಕ್ಕಿಂತ ತಾನೇ ಪಂಢರಪುರಕ್ಕೆ ಹೋಗಬಿಟ್ಟರೆ, ಅವನು ಬೇರೆ ಮದುವೆ ಮಾಡಿಕೊಂಡು ಸಂಸಾರದಲ್ಲಿ ಸುಖವನ್ನಾದರೂ ಕಂಡಾನು. ಅದೊ ಆಚೆಗೆ ನೋಡು ಅವಳೇ ಬರುತ್ತಿರುವಳು! ನೋಡಿದಿಯಾ ಅವಳನ್ನು- ಎತ್ತ ಕಡೆಗೋ ದೃಷ್ಟಿ-, ಸೆರಗು ಹೊತ್ತ ರೀತಿ ನೋಡು; ನಡೆಯುವ ರೀತಿ ನೋಡು; ರೂಪ ಎಷ್ಟು ಚೆನ್ನವಿದ್ದರೇ ಏನು; ಅದಕ್ಕೆ ಓರಣವಿಲ್ಲದ ಮೇಲೆ ಅದನ್ನು ತಕ್ಕೊಂಡು ಏನು ಮಾಡುವದು?—

(ಸಖೂದೇವಿಯು ಬಿಳಿಯ ವಸ್ತ್ರವನ್ನುಟ್ಟು ಬರುತ್ತಿದ್ದಾಳೆ. ಕೈಯಲ್ಲಿ ಕೊಡ, ತಲೆಯ ಮೇಲೆ ಅರಿವೆಯ ಮೂಟೆ)

ರಾಗ ಭೂಪ, ತಾಳ ತ್ರಿವಟ.

**ಯದುತನಯಾ ಗೋಪಾಲಾ | ಮುದದೆ ತೋರೈ ತವಪದ ಪಂಕಜ || ಪಲ್ಲ || ದೀನವತ್ಸಲಾ | ಅನಾಥಸತಿಯ ಕನಿಕರದಿಂದಾದರಿಸುವದೀಗ || ವನಜಲೋಚನಾ ಕಾಯೋ || ೧ ||**

**ಪದ್ಮಾವತಿ**—ಯಾಕೆ ಸಖೂದೇವಿಯವರೇ ಬರುವದಕ್ಕೆ ತಡವಾಯಿತು? ಒಗೆವ ಬಟ್ಟೆಗಳು ಕಡಮೆಯಾಗಿದ್ದವೆ, ಅಥವಾ ಮಾರ್ಗದಲ್ಲಿ ಯಾನಾದರೂ ಪಂಢರಪುರದ ಯಾತ್ರಿಕನು ಭೆಟ್ಟಿಯಾಗಿದ್ದನೊ? ನೋಡಮ್ಮಾ ನನಗೆ ಯಾವಾಗಲೂ ಅದೇ ಅಂಜಿಕೆಯು!

ಯಾವನಾದರೂ ಲಕ್ತ್ಯ ಯಾತ್ರಿಕಾರನಿಗೆ ಮರುಳಾಗಿ ನೀನು ಓಡಿ ಹೋದರೆ ನಾವೇನು ಮಾಡಬೇಕು.

**ಸಖೂದೇವಿ—**(ಕಿವಿಯ ಮೇಲೆ ಕೈಯಿಟ್ಟುಕೊಂಡು) ವಿಠ್ಠಲ. ವಿಠ್ಠಲ. ಎಂಥ ಮಾತಾಡುವಿರಿ ನೀವು. ಯಾತ್ರಿಕಾರರು ಮಹಾಭಾಗ್ಯಶಾಲಿಗಳು. ಪ್ರತಿ ಏಕಾದಸಿಗೂ ಅವರಿಗೆ ಪಂಢರಿನಾಥನ ದರ್ಶನ ದೊರಕುವದು. ಚಂದ್ರಭಾಗೆಯ ಸ್ನಾನ ಲಭಿಸುವದು. ಅಂಥ ಪುಣ್ಯಾತ್ಮರ ಬಗ್ಗೆ ಹೀಗೆ ಮಾತಾಡಬೇಕೆ? ನಾಳೆ ಯುಗಾದಿ ಪ್ರತಿಪದೆಯ ದಿವಸ-ದೇವರಿಗೆ ಎಲ್ಲ ಅಲಂಕಾರವನ್ನಿಟ್ಟು ಪೂಜೀಸುವರು. ಆ ಮನೋಹರ ಮೂರ್ತಿಯನ್ನು ನೋಡುವ ಭಾಗ್ಯವು ನಮ್ಮಂತಹ ಪಾಮರರಿಗೆ ಹೇಗೆ ದೊರೆತೀತು? ಪದ್ಮಾವತಿ ಅತ್ತಿಗಿ ನೀವೆಂದಾದರೂ ಪಂಢರಪುರಕ್ಕೆ ಹೋಗಿದ್ದಿರಾ?—

**ಪದ್ಮಾವತಿ—** ನಮ್ಮಂಥ ಪಾಪಿಗಳಿಗೇಕಮ್ಮಾ ಪಂಢರಪುರದ ಯಾತ್ರೆಯು. ಮಹಾ ಭಗವದ್ಭಕ್ತಳಾದ ನಿನಗೇ ಲಭಿಸಲಿಲ್ಲ; ಅಂದಮೇಲೆ ನಮ್ಮ ಪಾಡೇನು. ನೀನು ಹೋಗುವದಿದ್ದರೆ ನನಗೂ ತಿಳಿಸು; ಅಂದರೆ ನಾನೂ ನಿನ್ನ ಜೊತೆಗೆ ಬರುತ್ತೇನೆ; ಅಂದರೆ ನಾಳೆ ನೀನು ವೈಕುಂಠಕ್ಕೆ ತೆರಳುವಾಗ ನಿನ್ನ ಸೆರಗು ಹಿಡಿದುಕೊಂಡು ಬಂದರೆ ವೈಕುಂಠದಲ್ಲಿಯೂ ನನಗೊಂದು ಸ್ಥಾನ ಸಿಕ್ಕೀತು!

**ಕಾವೇರಿ—** ಪದ್ಮಾವತಿ- ಹೀಗೇಕೆ ಚುಚ್ಚಿಮಾತಾಡುವಿಯೇ. ಅವಳು ಸಹಜವಾಗಿ ನಿನ್ನನ್ನು ಕೇಳಿದರೆ- ಅದಕ್ಕೆ ಇಂಥ ಉತ್ತರ ಕೊಡಬೇಕೆ?

**ಪದ್ಮಾವತಿ—** ಸಾಕು. ಸಾಕು. ನಿಮ್ಮಂಥವರ ಸಹವಾಸದಿಂದಲೇ ಅವಳ ಗತಿ ಈ ರೀತಿಯದಾಯಿತು. ಸಂಸಾರ ಹಾಳಾಗಿ ಹೋಯಿತು. ಅವಳ ಹುಚ್ಚುತನ ಹೋಗುವದಕ್ಕೆ ಉಪದೇಶ ಮಾಡುವದನ್ನು ಬಿಟ್ಟು ಎಷ್ಟು ಕೌತುಕ ಮಾಡುತ್ತಿದ್ದೀರಿ. ಇದೆಲ್ಲ ನನಗೆ ಸರಿಬರುವದಿಲ್ಲವಮ್ಮಾ!

**ಸಖೂದೇವಿ—**(ಪದ್ಮಾವತಿಯ ಮಾತಿನ ಕಡೆಗೆ ಲಕ್ಷವಿಲ್ಲದೇ) ಯಾಕೆ ಅತ್ತಿಗೆಯ

ವರೇ– ಖಂಡಿತವಾಗಿ ನೀವು–ನನ್ನ ಕೂಡ ಬರತಕ್ಕವರಲ್ಲವೆ?

**ಪದ್ಮಾವತಿ**—ಓಹೋ! ಬರದೇ ಹೋಗಿದ್ದೇನು! ಇನ್ನು ಮುಂದೆ ನನಗೆ ಬೇರೆ ಕೆಲಸವೇ ಇಲ್ಲ. ನೋಡಿದಿಯಾ ಕಾವೇರಿ– ನಾನು ಆಡಿದ ಮಾತು ಇವಳಿಗೆ ಕೇಳಿಸಿರಲಿಕ್ಕಿಲ್ಲವೆ? ತಿಳಿದಿರಲಿಕ್ಕಿಲ್ಲವೆ? ಏನೂ ಅರಿಯದವಳಂತೆ ಹೇಗೆ ಸೋಗು ಹಾಕುತ್ತಾಳೆ. ಇಂಥ ದುರ್ವಿ ದ್ಯೆಗಳು ನನಗೇನು ತಿಳಿಯುವೇನು?—

**ಸಖೂದೇವಿ**—ಖಂಡಿತವಾಗಿ ಗೆಳತಿಯರೇ ನೀವೂ ಪಂಢರಪುರಕ್ಕೆ ಬರುವದಾದರೆ, ನಾಲ್ವರೂ ಜೊತೆಯಾಗಿಯೇ ಹೋಗೋಣ. ಯಾತ್ರಿಕಾರರು ಗುಂಪು–ಗುಂಪಾಗಿ ನಾಳಿನಿಂದ ಇದೇ ಮಾರ್ಗ ವಾಗಿ ಹೋಗುತ್ತಾರೆ. ಅದೋ ಅಲ್ಲಿ ನೋಡಿ– ಒಂದು ಗುಂಪು ಕಾಣುತ್ತದೆ. ನಮಗೆ ಯಾರ ಜೊತೆಯೂ ಅವಶ್ಯಕತೆಯಿಲ್ಲ—

**ಪದ್ಮಾವತಿ**—ನಿನ್ನಂಥ ಭಕ್ತಳಿಗೆ ಯಾರ ಜೊತೆ ಯಾಕೆ ಬೇಕವ್ವಾ? ಪಂಢರಪುರದ ಶ್ರೀ ವಿಠ್ಠಲನೇ ನಿನಗೆ ರಕ್ಷಕನಾಗಿರುವಾಗ, ಇನ್ನೊಬ್ಬರ ರಕ್ಷಣೆ ನಿನಗೇಕೆ ಬೇಕಾದೀತು?—

**ಸಖೂದೇವಿ**—ನಿಶ್ಚಯ- ಎಲ್ಲರನ್ನೂ ರಕ್ಷಿಸುವವನು ಆತನೇ ಸರಿ!

**ಪದ್ಮಾವತಿ**—ಆದರೆ ದಿನಬೆಳಗೂ ಪತಿಯಿಂದ ಜೋಡಿನ ಏಟು ತಿನ್ನು ವಾಗ ಎಲ್ಲಿ ಹೋಗಿರುತ್ತಾನೆ– ಆ ನಿನ್ನ ವಿಠ್ಠಲನು!

**ಕಾವೇರಿ**—ಛೀ ಛೀ ಪದ್ಮಾವತೀ–ಏನವ್ವಾ ನಿನ್ನ ಕೊಳಕು ಮಾತು!

**ಸಖೂದೇವಿ**—ಕಾವೇರೀ– ಪದ್ಮಾವತಿ ಅತ್ತಿಗೆಯುವರು ಹೇಳುವ ಮಾತು ಅಸತ್ಯವಲ್ಲ. ಇದ್ದುದನ್ನೇ ಅವರು ಹೇಳುವರು. ಇನ್ನು ಮೇಲೆ ನಾವು ನಮ್ಮ ಕೆಲಸವನ್ನು ಮುಗಿಸೋಣ. ನಿಮ್ಮ ಒಗೆಯೋಣವು ಮುಗಿಯಿತೆ?—

**ಅನುಸೂಯಾ**—ಆಗಲೇ ನಾವು ಮುಗಿಸಿದೆವು. ನೀರು ತುಂಬಿಕೊಂಡು ಹೊರಡುವದರಲ್ಲಿದ್ದೆವು; ಅಷ್ಟರಲ್ಲಿ ನೀನು ಬಂದೆ; ನಾವು ನಿಂತು ಕೊಂಡೆವು.

**ಕಾವೇರಿ**— ಅನುಸೂಯಾ- ಎಲ್ಲ ಒಗೆದುಕೊಂಡು ಬರಲು ಸಖೂದೇವಿಗೆ ತಡವಾಗುವದು. ನಾವು ಅವಳ ಕೆಲಸದಲ್ಲಿ ನೆರವಾಗಿ- ಅವಳ ಕೆಲಸವನ್ನು ಬೇಗನೇ ಮುಗಿಸೋಣ: ಅಂದರೆ ನಾವೆಲ್ಲ ಕೂಡಿಯೇ ಹೋಗಲು ಅನುಕೂಲವಾಗುವದು.

**ಅನುಸೂಯಾ**— ಹೌದು. ಹೌದು. ಹಾಗೇ ಮಾಡೋಣ.

**ಪದ್ಮಾವತಿ**— ನಾನೊಲ್ಲೆನವ್ವಾ-! ಎರಡನೇಯವರ ಕೆಲಸ ನಾವೇಕೆ ಮಾಡಬೇಕು! ನೀವಾದರೂ ಮುಂದೆ ಬಿದ್ದು ಅವಳ ಕೆಲಸ ಯಾಕೆ ಮಾಡುತ್ತಿರೊ, ಅದು ನನಗೆ ತಿಳಿಯುವದಿಲ್ಲ. ಅವಳು ವಿಠ್ಠಲನ ಭಕ್ತಳು; ಅಂದಮೇಲೆ ಅವನೇ ಬಂದು ಯಾಕೆ ಇವಳಿಗೆ ಸಹಾಯ ಮಾಡಬಾರದು? ಭಕ್ತರಿಗಾಗಿ ಅವನು ಎಷ್ಟೋ ಕೆಲಸ ಮಾಡುತ್ತಾನೆಂದು ಇವಳೇ ಎಷ್ಟೋ ಸಲ ಹೇಳಿದುದನ್ನು ನೀವೇ ಕೇಳಿಲ್ಲವೆ? ಈಗೇಕೆ! ನಾನು ಹೋಗುವೆನು. ನೀವು ಅವಳ ಶೀರೆಯನ್ನಾದರೂ ಒಗೆಯಿರಿ; ಇಲ್ಲ- ಮತ್ತೇನನ್ನಾದರೂ ಮಾಡಿರಿ.--

**ಕಾವೇರಿ**— ಹೋಗಮ್ಮ ಹೋಗಮ್ಮ ನೀನು- ನಾವು ಸಖೂದೇವಿಯ ಕೆಲಸ ಪೂರೈಸಿಕೊಟ್ಟು ಬರುತ್ತೇವೆ!

**ಪದ್ಮಾವತಿ**— ಚನ್ನಾಯಿತು. ನೀವು ಅವಳ ಸಹವಾಸಕ್ಕೆ ಬಿದ್ದರೆ, ಅವಳಂತೆ ನೀವೂ ಜೋಡಿನ ಏಟು ತಿನ್ನಬೇಕಾಗುತ್ತದೆ ಲಕ್ಷ್ಯವಿರಲಿ!

**ಕಾವೇರಿ**— ದಯಮಾಡಿ ನೀನು ಹೊರಟು ಹೋಗು ತಾಯೀ! ನಿನ್ನ ಕೊಳಕು ಮಾತನ್ನು ನಾವು ಕೇಳಲಾರೆವು. (ಪದ್ಮಾವತಿ ಹೋಗುವಳು)

**ಅನುಸೂಯಾ**— ಕಾವೇರಿ- ಈಗ ಇಲ್ಲಿ ನಡೆದ ಎಲ್ಲ ಮಾತುಗಳನ್ನೂ ಇವಳು- ಸಖೂದೇವಿಯ ಅತ್ತೆಯ ಮುಂದೆ ತಿಳಿಸುತ್ತಾಳೆ; ಅದಕ್ಕೆಂದೇ ನಮ್ಮಕಿಂತ ಮೊದಲು- ಅವಳು ಹೋದಳು. ದಾರಿಯಲ್ಲಿ ನಮ್ಮ ಮನೆಯಲ್ಲಿ ಏನು ಚುಚ್ಚಿಕೊಡುತ್ತಾಳೋ!

**ಕಾವೇರಿ**— ನಮ್ಮ ಮನೆಗಂತೂ ಅವಳು ಬರುವಂತೆಯೇ ಇಲ್ಲ!

**ಸಖೂದೇವಿ**— ಕಾವೇರೀ- ಮತ್ತೊಬ್ಬರ ದೋಷಗಳನ್ನು ನಾವೇಕೆ ಎಣಿಸಬೇಕು. ನೀವಾದರೂ ನನಗೋಸ್ಕರ ಯಾಕೆ ಕಷ್ಟಪಡುತ್ತೀರಿ.

ನೀವು ಹೋಗಿರಿ. ನಾನು ನನ್ನ ಕೆಲಸವನ್ನು ಮುಗಿಸಿಕೊಂಡು ಬರುತ್ತೇನೆ: ಸುಮ್ಮನೇ ನಿಮಗೆ ತಡವಾದೀತು!

**ಕಾವೇರಿ**—ನಿನ್ನನ್ನು ಬಿಟ್ಟು-ನಾನಂತೂ ಹೋಗುವದಿಲ್ಲ!

**ಅನುಸೂಯಾ**—ಕೆಲಸ ಉಳಿದಿದೆ ಎಲ್ಲಿ? ಎಲ್ಲ ಮುಗಿದು ಹೋಗಿದೆ. ಎಲ್ಲರೂ ಜೊತೆಯಾಗಿಯೇ ಹೋಗೋಣ!

**ಸಖೂದೇವಿ**—ಕಾವೇರಿ– ಅನುಸೂಯಾ— ನನ್ನ ಮೇಲೆ ನಿಮ್ಮದೆಷ್ಟು ಒಲವು! ತೊಂದರೆ ಪಡಬೇಡಿ ಎಂದು ಹೇಳಿದರೆ, ಕೇಳುವದಿಲ್ಲ. ನಡೆಯಿರಿ ಹಾಗಾದರೆ ಹೋಗೋಣ.

ರಾಗ ಕಾಫಿಜಿಲ್ಹಾ, ತಾಳ ತ್ರಿವಟ.

**ಈ ಘನಪ್ರೇಮಕೆ ನಾ ಋಣಿಯಾದೆ। ರಾಗದಿ ನಿಮ್ಮನು ರಮೇಶನು ಕಾವಾ ॥ ಪಲ್ಲ ॥**
**ಹಿತದ ನುಡಿಗಳ ಲಾಲಿಸಿ ಮನದೆ। ವ್ಯಥೆಯನೀಗಿ ಸಂತೋಷಿತಳಾದೆ ॥ ೧ ॥**

(ಎಲ್ಲರೂ ಹೋಗುವರು) (ಪರದೆ ಬೀಳುವದು)

---

## ೨ ನೇ ಪ್ರವೇಶ.

(ಸ್ಥಳ: ಗದಾಧರ ಪಂತರ ಮನೆಯ ಹಿಂಭಾಗ. ಪದ್ಮಾವತಿಯು ಗಡಿಬಿಡಿಯಿಂದ ಪ್ರವೇಶಿಸುವಳು)

**ಪದ್ಮಾವತಿ**—ಅವಳ ಕಣ್ಣಿಗೆ ನಾನು ಬೀಳಲೇ ಇಲ್ಲ. ಅದೇ ಚೆನ್ನಾಯಿತು. ಆದರೆ ನನಗೆ ಸಖೂದೇವಿಯ ಬಗ್ಗೆ ಭಯವೇಕೆ ಉಂಟಾಗಿದ್ದೀತು? ಹಲಬಾಗಿಲಿನಿಂದ ಅವಳು ಮನೆಯನ್ನು ಪ್ರವೇಶಿಸಿದುದನ್ನು ನಾನು ದೂರದಿಂದ ನೋಡಿದೆನು. ಅಲ್ಲಿ ನಿಲ್ಲಲ್ಲಿಕ್ಕೆ ಮನಸ್ಸೇ ಆಗಲಿಲ್ಲ. ಈಗಿಂದೀಗಲೇ ಹೋಗಿ ಚಂಡಿಕಾಬಾಯಿಗೆ ಈ ಸಮಾಚಾರವನ್ನು ತಿಳಿಸುವೆನು. ಅವಳ ಗೆಳತಿಯರು ಅವಳನ್ನು ಹೊಗಳುತ್ತಾರೆಂದು. ನಾನು ಕೂಡ ಹಾಗೇ ಮಾಡಬೇಕೆ? ಇಂದು ಅವಳ ಸ್ನೇಹಿತೆಯರು ಆವಳ ಕೆಲಸದಲ್ಲಿ ನೆರವಾದ್ದನ್ನು ಹೇಳಿಯೇ ತೀರಬೇಕು. ಬೆಳಿಗ್ಗೆ ನೋಡಿದ ಪ್ರಕಾರವನ್ನಂತೂ ಈ

ಮೊದಲೇ ತಿಳಿಸಿಬಿಟ್ಟಿದ್ದೇನೆ. ತಿಳಿಸದೇ ಹಾಗೇ ಹೇಗೆ ಸುಮ್ಮನೇ ಕೂಡಬಂದೀತು! ಇವಳು ಹೀಗೆ ಮಾಡುತ್ತ ಮಾಡುತ್ತ ಯಾವನಾದರೂ ಒಬ್ಬ ಟೊಣಪ ಯಾತ್ರಿಕಾರನ ಜೊತೆಗೆ ಓಡಿಹೋದರೆ ಏನು ಮಾಡುವದು! ಆಗ ಯಾರ ಮರ್ಯಾದೆ ಹೋಗುವದು! ಹೋಗುವದು ನಮ್ಮ ಮರ್ಯಾದೆಯೇ ಅಲ್ಲವೆ? ಇಂದು ನಾನು ಹೊತ್ತಿಸಿದ ಬೆಂಕಿಯು ಇಷ್ಟು ವಿಕೋಪಕ್ಕೆ ಹೋದೀತು– ಅವಳ ಭಕ್ತಿಯುಪರೀಕ್ಷೆಯ ಪ್ರಸಂಗವೇ ಬಂದಂತೆಆದು! ಇವಳ ಹುಚ್ಚುತನಕ್ಕೆ ಜನ ಸಾಧ್ವಿಯೆಂದು ಕರೆಯುತ್ತಾರೆ, ಆದರೆ ನಮ್ಮ ಬೆಡಗಿಗೆ ಹೆಸರಿಡುತ್ತಾರೆ. ಯಾರೊಬ್ಬರೂ ಸಖೂದೇವಿಯು ಸಾಧ್ವಿಯು– ಸಾತ್ವಿಕಳು– ಅನ್ನುತ್ತಾರೆ; ಅಂದರೆ ನಾವೇನು ಬಜಾರಿಗಳೇ! ಈ ವಯಸ್ಸಿನಲ್ಲಿ ನಾವು ಬೆಡಗು ಬಿನ್ನಾಣ ಮಾಡದಿದ್ದರೆ, ಯಾವಾಗ್ಗೆ ಮಾಡಬೇಕು. ನಾನಂತೂ ಅವಳ ದುರ್ದೆಸೆಯನ್ನು ಚನ್ನಾಗಿ ಮಾಡತಕ್ಕವಳು! (ಒಳಗಿನಿಂದ ಚಂಡಿಕಾಬಾಯಿಯ ಧ್ವನಿಯು ಕೇಳಿಸುವದು ಅದೋ ಬಾರು ಮಾಡಿವ ಫಿರಂಗೀ ಗುಂಡು ಹಾರುವದಕ್ಕೆ ಪ್ರಾರಂಭವಾಗಿದೆ! ಚಂಡಿಕಾಬಾಯಿಯ ಧ್ವನಿಯೇ ಇದು! ಕೈಗೂಡಿತು ನಮ್ಮ ಕೆಲಸ ?—

(ಹೋಗುವಳು) (ತೆರೆ ಏಳುವದು)

---

## ೩ ನೇ ಪ್ರವೇಶ.

(ಸ್ಥಳ:—ಗದಾಧರಪಂತರ ಮನೆ. ಚಂಡಿಕಾಬಾಯಿಯು ಕೋಪದಿಂದ ಕಾದು ಹೋಗಿದ್ದಾಳೆ. ನದಿಯಿಂದ ಬಂದ ಹಾಗೆಯೇ ಸಖೂದೇವಿಯು ನಿಂತಿದ್ದಾಳೆ.)

**ಚಂಡಿಕಾ**— ಏನೇ ಏನ ಖೋಡೀ ಅರಿವೆ ಒಗೆಯುವದಕ್ಕೆ ಹೋಗಿದ್ದೆಯೋ ಅಥವಾ ಮತ್ತೇತಕ್ಕಾದರೂ ಹೋಗಿದ್ದೆಯೋ! ಇನ್ನೂ ನಿನಗೆ ಎಷ್ಟೆಂದು ಶಾಸನ ಮಾಡಬೇಕು; ಮತ್ತು ಬುದ್ಧಿ ಹೇಳಬೇಕು! ಹೊಡೆದು–ಹೊಡೆದು ನನ್ನ ಕೈಗಳಂತೂ ಬಿದ್ದು ಹೋದವು. ಪಂಢರಪುರಕ್ಕೆ ಹೋಗುವದೇ ನಿನ್ನ ಮನಸ್ಸಿನಲ್ಲಿದ್ದರೆ, ಹೋಗು

ಒನ್ಮೆ ಹಾಳಾಗ! ಹೋದಮೇಲೆ ಒಂದು ನಾಯಿ ಕೂಡ ನಿನ್ನನ್ನು ಕರೆಯ ಬರುವದಿಲ್ಲ. (ಸಖೂದೇವಿಯ ಗಲ್ಲ ಹಿಂಡುತ್ತಾ) ನೋಡಿದಿಯಾ ಇಷ್ಟು ಮಾತಾಡಿದರೂ—ಪಿಟ್ಕೆಂದು ಉಸುರುವದಿಲ್ಲ. (ಒಗೆದ ಹಿಂಡಿಕೆಯನ್ನು ನೆಲದ ಮೇಲೆ ಹೊರಳಿಸಿ) ಇದೂ ಇನ್ನು ಮೇಲೆ ನಿನಗೆ ಇದೇ ಶಿಕ್ಷೆಯು. ಹೋಗು ಇಂಥಹ ಬಿಸಿಲಿನಲ್ಲಿಯೇ ಮತ್ತೆ ಹೋಗಿ ಅರಿವೆ ಒಗೆದುಕೊಂಡು ಬಾ. ಇಂದು ಹಬ್ಬ—ಯಾಕೆ ಕೆಟ್ಟ ಮಾತಾಡಬೇಕೆಂದು ಮಾಡಿದ್ದೆ; ಆದರೆ ನೀನೆಲ್ಲಿ ಕೇಳುತ್ತಿ! ಏಟುಗಳನ್ನು ತಿನ್ನದ ವಿನಹ ನಿನಗೆ ಅನ್ನವೇ ರುಚಿಸುವದಿಲ್ಲ. ಈ ದಿವಸ ನಿನಗೆ ಊಟಕ್ಕೆ ಹಾಕುವದಿಲ್ಲ! ಇವತ್ತು ಬೆಳಿಗ್ಗೆ ನದೀತೀರದ ಮೇಲೆ ಯಾವ ಯಾತ್ರಿಕರನ ಜೊತೆಗೆ ಮಾತಾಡುತ್ತಿದ್ದಿ? ಯಾವ ಏಕಾಂತ ನಡೆದಿತ್ತು? ಅವನ ಹತ್ತಿರವೇ ಹೋಗು. ಅವನೇ ನಿನಗೆ ಕೂಳು ಹಾಕುತ್ತಾನೆ!

**ಸಖೂದೇವಿ**— ಇಲ್ಲ. ಅತ್ತೆಯವರೇ ನಾನೆಲ್ಲಿಯೂ ಮಾತಾಡುತ್ತ ನಿಂತಿರಲಿಲ್ಲ; ಹೊತ್ತು ಕಳೆಯಲಿಲ್ಲ; ಬೇಗನೇ ಬರಲಿಕ್ಕೆ ಹೇಳಿದ್ದರಿಂದ ಕೆಲಸ ಮುಗಿಸಿಕೊಂಡು ನೆಟ್ಟಗೆ ಮನೆಯ ಕಡೆಗೇ ಬಂದೆ!

**ಚಂಡಿಕಾ**— ಮತ್ತೆ ಸುಳ್ಳು ಮಾತಾಡುವಿಯಾ? ತಿರುಗಿ ಬರುವಾಗ ಮಾರ್ಗದಲ್ಲಿ— ಯಾವ ಯಾತ್ರಿಕಾರನ ಸಂಗಡ ಮಾತಾಡುತ್ತ ನಿಂತಿದ್ದೆ— ಹೇಳು ಮೊದಲು!

**ಸಖೂದೇವಿ**— ಹೌದು ಆ ಆಲದ ಮರದ ಕೆಳಗೆ ವಿಶ್ವನಾಥಭಟ್ಟರು ಕುಳಿತಿದ್ದರು; ಅವರು ನನ್ನ ತಂದೆಯ ಸ್ನೇಹಿತರು; ಕರೆದು ಮಾತಾಡಿಸಿದ್ದರಿಂದ— ಸಲ್ಪ ಹೊತ್ತು ನಿಂತಿದ್ದೆ.

**ಚಂಡಿಕಾ**— ನಿನ್ನ ತಂದೆಯ ಸ್ನೇಹಿತರೆಂದು ಹೇಳುತ್ತ—ಇಂಥ ಎಷ್ಟೋ ಮುತ್ತ್ಯಾಳರು ನಿನ್ನನ್ನು ಕರೆದು ಮಾತಾಡಿಸಿದರೆ- ನೀನು ಅವರ ಬೆನ್ನು ಹತ್ತಿಯೇ ಹೋಗತಕ್ಕವಳೇ- ಹಾಗಾದರೆ! ಹೇಳು— ಏನು ಮಾತಾಡಿದೆ ಅವರ ಕೂಡ!

**ಸಖೂದೇವಿ**— ಯಾವ ಮಾತೂ ಇಲ್ಲ. ಬಹಳ ದಿವಸಕ್ಕೆ ನಾನು ಅವರಿಗೆ ಭೆಟ್ಟಿಯಾದೆನೆಂದು——

**ಚಂಡಿಕಾ**—ಅವರು ನಿನ್ನ ತಲೆಯಮೇಲೆ ಚಿನ್ನದ ಮಳೆಯನ್ನೇ ಸುರಿಸಿದರೋ-

**ಸಖೂದೇವಿ**—ನನ್ನ ತಂದೆಯ ಸ್ಮರಣೆಯಾಗಿ ಅವರು ನನ್ನನ್ನು ಕುಶಲ ಪಶ್ನೆ ಕೇಳಿದರು.

**ಚಂಡಿಕಾ**—ಇಷ್ಟು ಪ್ರೇಮದಿಂದ ತನ್ನ ಸ್ನೇಹಿತನ ಮಗಳ ಕುಶಲಪ್ರಶ್ನೆ ಕೇಳಿದ ಗೃಹಸ್ಥ-ಮನೆತನಕ ಬರಬೇಕಾಗಿತ್ತು; ನಿನ್ನ ಕೂಡ ತುಂಬಿದ ಮಾರ್ಗದಲ್ಲಿ-ಮಾತಾಡುವದೇನು ಕೆಲಸ!

**ಸಖೂದೇವಿ**--ಅವರು ನನಗೆ ತಂದೆಯ ಸಮಾನರು—!

**ಚಂಡಿಕಾ**—ಹೌದು. ಹೌದು. ಎಲ್ಲರೂ ನಿನಗೆ ತಂದೆಯ ಸಮಾನ-ವಿಠ್ಠಲನ ಸಮಾನರೇ ಇರುವರು; ಆದರೆ ನಮಗೇನು ಅವರ ಸಂಬಂಧ! ನಾನು ಇಂತಹ ನಡತೆಯನ್ನು ಸಹಿಸುವದಿಲ್ಲವೆಂದು ನೂರು ಸಲ ಹೇಳಿದೆ; ಅದರ ಕಡೆಗೆ ನಿನ್ನ ಲಕ್ಷ್ಯವಿದ್ದರಲ್ಲವೆ ?—ಮಾಧವಾ- ಎಲೊ ಮಾಧವಾ— (ಮಾಧವನು ಬರುವನು) ನಿನ್ನ ಹೆಂಡತಿಯು ಯಾತ್ರಿಕಾರರ ಬೆನ್ನು ಹತ್ತಿ ಪೂರೆಲ್ಲ ಸುತ್ತುವಳು; ಆದರೆ ನೀನು ಮಾತ್ರ ಕುಂಭನಂತೆ ನೋಡುತ್ತ ನಿಂತಿರುವೆ! ಎಲೋ ನೀನು ಗಂಡಸೋ- ಹೆಂಗಸೋ- ಹೆಂಡತಿಯನ್ನು ಆಳುವ ಜಾಣತನವನ್ನೂ ನಿನಗೆ- ನಾನೇ ಹೇಳಿಕೊಡಬೇಕೆ ?

**ಮಾಧವ**—ಅಮ್ಮಾ ನಾನು ಎಲ್ಲ ಕೇಳುತ್ತಿದ್ದೆ; ಆದರೆ ನೀನು ಕರೆಯದೆ ನಾನು ಹೇಗೆ ಬರಲಿ- ಎಂದು ಸುಮ್ಮನೇ ನಿಂತಿದ್ದೆ (ಸಖೂದೇವಿಗೆ) ಏನೇ ದಾರಿಯಲ್ಲಿ ಯಾತ್ರಿಕಾರನ ಜೊತೆಗೆ ಮಾತಾಡುವದಕ್ಕೆ ನಿನಗೆ ನಾಚಿಕೆಯಾಗಲಿಲ್ಲವೆ ? ಮನೆಯಲ್ಲಿ ನನ್ನನ್ನು ನೋಡಿದ ಕೂಡಲೇ ಓಡಿಹೋಗುತ್ತಿ; ಆದರೆ ಯಾವುದೋ ಯಾತ್ರಿಕಾರನ ಸಂಗಡ ಮಾತಾಡಲು ನಿನಗೆ ಏನೂ ಅನಿಸಲಿಲ್ಲವೆ?

(ಸಖೂದೇವಿಯನ್ನು ಹೊಡೆಯುವನು)

**ಚಂಡಿಕಾ**—ಬೇಷ. ಬೇಷ- ಮೇಲಿಂದ-ಮೇಲೆ ಹೀಗೆ ಏನಾದರೂ ಪೌರುಷವನ್ನು ತೋರಿಸುತ್ತಿರು. ಪೂಟವಾದ ಮೇಲೆ ಬಿಸರಿಕೆ

ಬರುವದೆಂದು, ನದಿಗೆ ಹೋಗಿ ಅರಿವೆ ಒಗೆದುಕೊಂಡು ಬಾ ಎಂದು ನದಿಗೆ ಕಳಿಸಿದರೆ, ಇವಳು ಬಿಟ್ಟ ಬೇಸರದಿಂದ ಹೇಗೊ ಅರಿವೆ ಹಿಂಡಿಕೊಂಡು— ಮಾರ್ಗದಲ್ಲಿ— ಗಿಡದ ಕೆಳಗೆ— ನಾಚಿಕೆ ಮರ್ಯಾದೆ ಇಲ್ಲದೇ— ಯಾತ್ರಿಕಾರನ ಸಂಗಡ ಹರಟೆಕೊಚ್ಚುತ್ತ ನಿಲ್ಲಬೇಕೆ? ಮತ್ತೆ ಹೇಳುತ್ತಾಳೆ "ಅವರು ನನ್ನ ತಂದೆಯ ಸ್ನೇಹಿತ" ಎಂದು—! ಇದು ಕೂಡ ನನಗೆಲ್ಲಿ ಗೊತ್ತಾಗುತ್ತಿತ್ತು! ನದಿಯಿಂದ ಅದೇ ಮಾರ್ಗವಾಗಿ ಬರುತ್ತಿದ್ದ ಪದ್ಮಾವತಿಗೆ ಈ ಪ್ರಕಾರವು ಕಂಡಿತಂತೆ; ಅವಳು ನನಗೆ ತಿಳಿಸಿದಳು. (ಸಖೂದೇವಿಯು ಮೂರ್ಛೆ ಬೀಳುವಳು- ಮಾಧವನು ಕನಿಕರದಿಂದ ನೋಡುವನು) ಹೀಗೇಕೆ ನೋಡುವೆ ಅವಳ ಕಡೆಗೆ! ಅವಳ ಬಗ್ಗೆ ಎಷ್ಟು ಕನಿಕರ ತೋರಬೇಡ. ಹಾಗೆ ಬಿದ್ದುಕೊಳ್ಳಲಿ. ಇದೆಲ್ಲ ಮೈಗಳ್ಳತನ!

**ಮಾಧವ**— ಅಮ್ಮಾ ಇದು ಮೈಗಳ್ಳತನವಲ್ಲ; ನಿಜವಾಗಿಯೂ ಇವಳಿಗೆ ಮೂರ್ಛೆ ಬಂದಿರುವದು. ಸ್ವಲ್ಪ ನೀರು ತಂದು ಇವಳ ಕಣ್ಣಿಗೆ ಹಚ್ಚಬಾರದೇ—

**ಚಂಡಿಕಾ**— ಅಯ್ಯೋ! ಹೆಂಗಸಿನಂಥವನೇ! ಹೀಗೆ ನೀನು ಹುಚ್ಚುತನ ತೋರಿಸಿದರೆ ಇವಳು ಒಂದು ದಿನ ನಿನ್ನ ಕೈಯಲ್ಲಿ ಟೆಂಗಿನ ಪರಟೆ ಕೊಟ್ಟು, ಯಾವನಾದರೂ ಒಬ್ಬ ಯಾತ್ರಿಕಾರನ ಬೆನ್ನುಹತ್ತಿ ಹೋಗುವದೇ ಖಂಡಿತ. ಆಗ ನೀನು ಗೋಳಾಡುತ್ತ ಕೂಡಬೇಕಾಗುತ್ತದೆ. ಮೂರ್ಖ ಈ ಹೆಂಗಸರ ಪಾತಾಳ-ಯಂತ್ರವು ನಿಮ್ಮಂಥ ಗಂಡಸರಿಗೆ ಹೇಗೆ ತಿಳಿದೀತು? ಖಂಡಿತವಾಗಿ ಹೇಳುತ್ತೇನೆ— ಇವಳು ಮಾಡುವದೆಲ್ಲ ಬರಿಯ ಸೋಗು; ಮೈಗಳ್ಳತನ. ನೋಡು ಏಯೇನು ಹಾಕು ನಾಲ್ಕು ಒದೆತ; ಅಂದರೆ ತಾನೇ ಎದ್ದು ಕೂಡುವಳು. (ಸಖೂದೇವಿಯು ಎದ್ದು ಕೂಡುವಳು. ವಿಠ್ಠಲಾ ಎನ್ನುವಳು.) ನೋಡಿದಿಯಾ ಒದೆತದ ಮಾತು ಕೇಳಿದಕೂಡಲೇ ಹೇಗೆ ಎದ್ದು ಕುಳಿತಳು! ಏಳೇ—ಏಳು—! ಸೆಟೆವಿಯೋ ಏಳು! ಇಷ್ಟು ದಿನ ಸುಮ್ಮನೇ ಯಾಕೆ ಪೀಡಿಸುವದೆಂದು ಸುಮ್ಮನಿದ್ದೆನು; ಇನ್ನು ಮುಂದೆ ಅದು ಸಾಧ್ಯವಿಲ್ಲ ಇದೊ ಈ ದಿವಸ ನಿನಗೆ— ಊಟಕ್ಕೆ

ಹಾಕುವದಿಲ್ಲ. ಇಂಥ ಬಿಸಿಲಿನಲ್ಲಿಯೇ ಹೋಗಿ ಈ ಬಟ್ಟೆಗಳನ್ನು ಒಗೆದುಕೊಂಡು ಬಾ–! ಸಾಯಂಕಾಲದೊಳಗಾಗಿ ಆ ರಂಜಣಿಯನ್ನು ತಂಬು. ನಿನ್ನಂಥ ಭಕ್ತಳ ಕೆಲಸವನ್ನು ಆ ವಿಠ್ಠಲನೇ ಮಾಡುತ್ತಾನಲ್ಲವೆ? ಹಾಗಾದರೆ ನಿನ್ನಗೋಸುರ ಅವನು ಶೀರೆಯನ್ನೇಕೆ ಒಗೆಯಬಾರದು? (ಮಾಧವನಿಗೆ) ಎಲೋ ಕಪಿಯೇ ಅವಳಕಡೆಗೇನು ನೋಡುವೆ ಆ ಎಂದು! ನಿನ್ನಲ್ಲಿ ಬಿಗಯಿಲ್ಲವೆಂದೇ ಹೀಗಾಯಿತು. ನಡೆ ಹೋಗು ಇಲ್ಲಿ ನಿಲ್ಲಬೇಡ (ಮಾಧವನು ಹೋಗುವನು) ಸಾಯಂಕಾಲದೊಳಗಾಗಿ ಆ ರಂಜಣಿಯನ್ನು ತುಂಬದಿದ್ದರೆ ತೋರಿಸುತ್ತೇನೆ ನನ್ನ ಕೈ! (ಹೋಗುವಳು)

**ಸಖೂದೇವಿ**— ದೇವಾ ಪಂಢರಿನಾಥಾ– ಇನ್ನು ಮುಂದೆ ನನ್ನಿಂದ ಸಹಿಸಲು ಸಾಧ್ಯವಿಲ್ಲ. ಮನೆಯ ಕೆಲಸದಲ್ಲಿ ಸ್ವಲ್ಪು ತಪ್ಪುವದಿಲ್ಲ; ಸೇವೆ ಮಾಡುವದರಲ್ಲಿ ಎಷ್ಟೂ ಕೊರತೆ ಮಾಡುವದಿಲ್ಲ; ಆದರೆ ನಾನು ಮಾಡುವ ತಪ್ಪು ಕೆಲಸವೇನಂದರೆ. ಸದಾಸರ್ವದಾ ನಿನ್ನ ನಾಮಸ್ಮರಣೆ, ಅದೊಂದೇ ನನ್ನ ತಪ್ಪು; ಅದಕ್ಕಾಗಿ ನಾನು ಇಷ್ಟೊಂದು ಕಷ್ಟವನ್ನನುಭವಿಸಬೇಕೆ? ಆಗಲಿ, ನಿನ್ನ ಚಿತ್ತ! ಆದರೆ ಅದೆಷ್ಟು ಕಷ್ಟಬಂದರೂ ನಾನು, ನಿನ್ನ ನಾಮಸ್ಮರಣೆಯನ್ನು ಬಿಡಲಾರೆನು! ಆಗಲಿ ಅತ್ತೆಯವರು ಆಜ್ಞಾಪಿಸಿದ ಮುಂದಿನ ಕೆಲಸಕ್ಕೆ ತೊಡಗುತ್ತೇನೆ.—

ರಾಗ ದೇಸ ತಾಳ ಏಕ್ತಾ.

**ದೇವಾಸಹಿಸೆನತಿ ತಾಪ । ಶ್ರೀ ವಾಸುದೇವಾ ॥ ಪಲ್ಲ ॥ ಮನೆಯ ಸಕಲ ಕಾರ್ಯವೆಸಗಿ । ನಿನ್ನ ಭಜನೆಮಾಳ್ಪೆ ॥ ಇನಿತು ಅದಕೆ ಶಾಸನವೇ ॥ ಮಾನ್ಯನೆ ಇದು ನ್ಯಾಯವೇ ॥ ೧ ॥**

---

# ೪ ನೇ ಪ್ರವೇಶ

ಸ್ಥಳ:—ಪಂಢರಪುರಕ್ಕೆ ಹೋಗುವ ಮಾರ್ಗ. ಗಿಡದ ಬುಡಕ್ಕೆ ವಿಶ್ವನಾಥಭಟ್ಟರು ಪುರಾಣ ಹೇಳುತ್ತಿದ್ದಾರೆ. ಸಮೀಪದಲ್ಲಿ ಗಿರಿಜಾಬಾಯಿ ಮತ್ತು ಯಾತ್ರಿಕರು ಕುಳಿತಿದ್ದಾರೆ. ದೂರದಿಂದ ಸಖೂಬಾಯಿಯು ನೀರು ತುಂಬಿದ ಕೊಡ ಹೊತ್ತುಕೊಂಡು ಹೋಗುತ್ತಿದ್ದಾಳೆ.)

ಶ್ಲೋಕ

**ಕರುಣವಿಲ್ಲದೆ ಪುಂಡಲೀಕನು । ನಿರುತ ತಾಯ್ತಂದೆಗಳ ನತಿಶಯ । ಜರಿದುಪೀಡಿಸಿ ವಾರನಾರಿಯ ಸಂಗವನುಗೈದಾ ॥ ಸಿರಿಯುನೆಲ್ಲವ ತೊರೆದು ಕಾಶಿ । ಪುರದ ಯಾತ್ರೆಗೆ ಸಾಗು । ತಿರೆ ತಾ ॥ ಪರಮಕುಕ್ಕುಟ ಮುನಿಗಳಾಶ್ರಮ ಕಂಡನಾಕ್ಷಣದೆ ॥ ೧ ॥**

**ಗಿರಿಜಾ**—ಆಗಿನಿಂದ ಈ ಹುಡುಗೆಯು ನೀರು ಹೊತ್ತೇ ಹೋಗುತ್ತಾಳೆ. ಈ ಮುಂಚೆ ನಾವು ಅವಳನ್ನು ಮಾತಾಡಿಸಿದಾಗ- ತಲೆಯ ಮೇಲೆ ಒಗೆದ ಅರಿವೆಯ ಹಿಂಡಿಕೆಗಳಿದ್ದವು; ಬಗಲಲ್ಲಿ ಕೊಡವಿತ್ತು ಸ್ವಲ್ಪ ಹೊತ್ತಿನಲ್ಲಿ ಮತ್ತೆ ಬಂದಳು. ಆಗಿನಿಂದ ಕನಿಷ್ಟ ಮೂವತ್ತು ಸಲವಾದರೂ ಓಡಾಡಿರಬಹುದು; ಇದರ ಅರ್ಥವೇನು ?

**ವಿಶ್ವನಾಥ ಭಟ್ಟ**—ನನಗೆ ಆಗಲೇ ಗೊತ್ತಾಯಿತು. ಅವಳಿಗೆ ಅತ್ತೆಯ ಮನೆಯಲ್ಲಿ ಎಳ್ಳಷ್ಟೂ ಸೌಖ್ಯವಿಲ್ಲ. ಅದೇ ಅದಕ್ಕೆ ಕಾರಣ. ಇವೆಲ್ಲ ಸಂಚಿತ ಕರ್ಮಗಳು; ಅವು ನಾಶವಾಗುವತನಕ ಹೀಗೇ ಸಾಗತಕ್ಕದ್ದು.

**ಗಿರಿಜಾಬಾಯಿ**—ಪಾಪ ಹುಡುಗೆಯ ಹೊಟ್ಟೆಯಲ್ಲಿ ಒಂದು ತುತ್ತು ಅನ್ನವಾದರೂ ಬಿದ್ದಿರುವದೋ ಇಲ್ಲವೋ ?

**ಸಖೂದೇವಿ**—(ದಾರಿಯ ಒಂದು ಬದಿಗೆ ಕೊಡವನ್ನು ಇಳಿಸಿ ಉಡಿಯಲ್ಲಿದ್ದ ವಿಠ್ಠಲ ಮೂರ್ತಿಯನು ಕೈಯಲ್ಲಿ ತಕ್ಕೊಳ್ಳುವಳು) ದೇವಾ ಪಂಢರಿನಾಥಾ— ಇನ್ನೂ ನನ್ನನ್ನು ಎಷ್ಟು ಪರೀಕ್ಷಿಸುವೆ ? ಇತರರಿಗಿದ್ದಂತೆ ನನಗೇನಾದರು ತವರು ಮನೆಯ ಆಶ್ರಯವಿರುವದೇ— ಮಮತೆ

ಯಿಂದ ಮುಂದೆ ಕರೆದು, ಮಾತಾಡಿಸುವವರಿದ್ದಾರೆಯೆ ? ಮಗಳೆಂದು ಮೈದಡವಿ, ನನ್ನ ದುಃಖವನ್ನು ಕೇಳುವ ತಾಯಿ-ತಂದೆಯರಿದ್ದಾರೆಯೇ ? ಯಾರೂ ದಿಕ್ಕಿಲ್ಲದ ಅನಾಥೆ ನಾನು; ನನಗೆ ನೀನೇ ದಿಕ್ಕು; ನೀನೇ ತವರು ಮನೆ; ನೀನೇ ತಂದೆ ತಾಯಿ; ನನಗೆ ಮತ್ತೇನೂ ಬೇಡ; ಬೇಗನೇ ನನ್ನನ್ನು ಪಂಢರಪುರಕ್ಕೆ ಕರೆದುಕೊಂಡು ಹೋಗು; ನಿನ್ನ ಪಾದದರ್ಶನ ಮಾಡಿಸು; ನಿನ್ನ ನಾಮಸ್ಮರಣೆ ಮಾಡುತ್ತೇನೆಂದು ನಾನಿಂಥ ಕಷ್ಟಕ್ಕೆ ಒಳಗಾಗಬೇಕೆ ? ಅಥವಾ ಹೀಗೂ ಇದ್ದೀತು. ನನ್ನಲ್ಲಿಯೇ ದೋಷವಿದ್ದೀತು. ನಮ್ಮ ದೋಷಗಳು ನಮಗೆಲ್ಲಿ ಕಾಣುತ್ತವೆ. ನಾನೇ [illegible] ನನ್ನನ್ನೇಕೆ ಪೀಡಿಸುತ್ತಿದ್ದರು! ಹೌದು-ಹೌದು- ಹಾಗೆ ಇರಬೇಕು. ನನ್ನ ತಂದೆಯವರೂ ಹಾಗೆ ಹೇಳುತ್ತಿದ್ದರು. (ಒಮ್ಮೆಲೆ ತಲೆಗೆ ಚಕ್ರ ಬಂದಂತಾಗುತ್ತದೆ.) ಅಮ್ಮಯ್ಯಾ ಇದೇನು— ನನ್ನ ತಲೆಯು ಹೀಗೆ ಸುತ್ತುತ್ತಿರುವದು- ಅಮ್ಮಾ—

(ಬೀಳುವಳು)

**ಗಿರಿಜಾಬಾಯಿ**—ಅಯ್ಯೋ ಪಾಪವೇ- ಮೂರ್ಛೆ ಬಂದು, ಹುಡುಗೆಯ್ಯ ನೆಲಕ್ಕೇ ಬಿದ್ದಳು. (ಅವಳ ಹತ್ತಿರ ಬಂದು) ಸಖೂ-ಸಖೂ- ಏಳು. ಏಳು ತಾಯೀ- ಏನಾಯಿತಮ್ಮಾ ನಿನಗೆ- (ಕಣ್ಣಿಗೆ ನೀರು ಹಚ್ಚುವಳು) ಮಗು ಏಳು- ಆಚೆಗೆ ಆ ಗಿಡದ ಬುಡಕ್ಕೆ ಹೋಗೋಣ. ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಆನಂತರ— ಮುಂದೆ—

**ಸಖೂದೇವಿ**—(ಅರಸಿದ್ರೆಯಲ್ಲಿದ್ದಂತೆ) ಯಾರು- ಯಾರು ತಾಯೀ ನೀವು ? ನಮ್ಮಮ್ಮನೇ! ನನ್ನನ್ನು ಪಂಢರಪುರಕ್ಕೆ ಕರೆದುಕೊಂಡು ಹೋಗಲು ಬಂದಿಯಾ ? ಅಮ್ಮಾ--ನಾನೂ ಪಂಢರಪುರಕ್ಕೆ ಬರಲೆ! ಇಷ್ಟುದಿನ ನನ್ನನ್ನು ಬಿಟ್ಟು, ಅಮ್ಮಾ ನೀನು ಎಲ್ಲಿಗೆ ಹೋಗಿದ್ದೆ ? ಪಂಢರಪುರಕ್ಕೆ ಹೋಗಿದ್ದೆಯಾ ; ಹಾಗಾದರೆ, ನನ್ನನ್ನೇಕೆ ಬಿಟ್ಟು ಹೋಗಿದ್ದೆ ?

**ಗಿರಿಜಾಬಾಯಿ**—ಸಖೂ- ಸಖೂ- ಚನ್ನಾಗಿ ಜಾಗ್ರತಳಾಗು; ನನ್ನ ಕಡೆಗೆ ನೋಡು; ನಾನು ನಿನ್ನ ತಾಯಿಯಲ್ಲ; ಗಿರಿಜಾಬಾಯಿಯು.

**ಸಖೂದೇವಿ**—ಏನಂದಿರಿ! ನೀವು ನನ್ನ ತಾಯಿಯಲ್ಲವೆ? ಇದೇನು ಭ್ರಾಂತಿಯು! ಆಗಲಿ ವಿಠ್ಠಲನ ಚಿತ್ತ. ಈಗ ನೀವು ಪಂಢರಪುರಕ್ಕೇ ಹೋಗುತ್ತೀರಲ್ಲವೇ? ನಾನೂ ನಿಮ್ಮ ಜೊತೆಗೆ ಬರಲೆ?

**ಗಿರಿಜಾಬಾಯಿ**—ಬರುವಂತೀ- ಅದಕ್ಕೇನಿಷ್ಟು ಒದ್ದಾಡುವೆ? ನಿನ್ನನ್ನು ನಾನು ಕರೆದುಕೊಂಡು ಹೋಗುವೆನು. ನಾಳೆ ಅರುಣೋದಯಕ್ಕೆ ನಾವು ಹೊರಡುತ್ತೇವೆ.

**ಸಖೂದೇವಿ**—ಅರುಣೋದಯುಕ್ಕೆ ಹೊರಡುತ್ತೀರಾ. ನಾನೂ ಬಂದೇ ತೀರುತ್ತೇನೆ. ಇಂದು ನನಗೆ- ನನ್ನ ತಾಯಿಯೇ ಭೆಟ್ಟಿಯಾದಳು; ನನ್ನನ್ನು ಪಂಢರಪುರಕ್ಕೆ ಕರೆದುಕೊಂಡು ಹೋಗಲು ಆವಳೇ ನಿಮ್ಮನ್ನು ಕಳಿಸಿರಬಹುದು; ಯಾಕಂದರೆ ಇಷ್ಟು ದಿನ ನಿಮ್ಮ ಭೆಟ್ಟಿ- ಆಗಿರಲೇ ಇಲ್ಲ; ಈಗ ಭೆಟ್ಟಿಯಾಗಬೇಕಂದರೆ, ಅದರಲ್ಲಿ ಆದೇ ಉದ್ದೇಶವಿರಬೇಕು. ಖಂಡಿತವಾಗಿಯೂ ನನ್ನನ್ನು ಕರೆದುಕೊಂಡು ಹೋಗುವಿರಾ? ನನಗೆ ನೀವು ಪಂಢರಪುರಕ್ಕೆ ಕರೆದುಕೊಂಡು ಹೋಗುತ್ತೀರೆಂದು ಹೇಳಿದಾಗಲೇ, ನನ್ನ ಹಶಿವೆ ನೀರಡಿಕೆಗಳು ಹಾರಿ ಹೋದವು; ನನ್ನ ಆಯಾಸವು ಪರಿಹಾರವಾಯಿತು; ಹಾಗಾದರೆ ಸೂರ್ಯೋದಯ ಪೂರ್ವದಲ್ಲಿಯೇ ನಾನು ನಿಮ್ಮನ್ನು ಕೂಡುತ್ತೇನೆ; ಖಂಡಿತವಾಗಿ ಕರೆದುಕೊಂಡು ಹೋಗುವಿರಲ್ಲವೆ? ಈ ವಿಠ್ಠಲನ ಪ್ರತ್ಯಕ್ಷವಾಗಿ, (ವಿಠ್ಠಲನ ಮೂರ್ತಿಯನ್ನು ತೋರಿಸುವಳು) ಹೇಳುವಿರಾ?—

ರಾಗ ಬೇಹಾಗ, ತಾಳ ತ್ರಿವಟ.

**ಕರವ ಮುಗಿವೆ ವಿಠ್ಠಲನ ತೋರೆ ॥ ನಾ ॥ ಚರಣ ಸರೋಜವ ನಾ ನೋಡಿ । ಕರುಣದಿ ಪಾಡಿ ॥ ಸಿರವನಿರಿಸುವೆನು ಬಾಗಿ ॥ ಪಲ್ಲ ॥ ಕರಪಿಡಿದು ಹರಿ । ಸುರಿವ ಕಂಬನಿಗಳ । ವರಿಸುತೆ ಸಿರದೊಳು ವರದಹಸ್ತವನಿಟ್ಟು । ಕರುಣಿಸಿ ಪೊರೆಯುವ ನಾಗ ॥ ೧ ॥**

**ಸಖೂದೇವಿ**—ಹಾಗಾದರೆ ನಾನಿನ್ನು ಬರಲೆ. ಬೆಳಗಾಗುವ ಪೂರ್ವದಲ್ಲಿಯೇ ನಾನು ನಿಮ್ಮ ಹತ್ತಿರ ಬರುತ್ತೇನೆ. ದಯವಿಟ್ಟು ನನ್ನನ್ನೂ ಕರೆದುಕೊಂಡು ಹೋಗಿರಿ; ಬಿಟ್ಟು ಹೋದೀರಿ ಮತ್ತೆ?

**ಗಿರಿಜಾಬಾಯಿ**— ಖಂಡಿತವಾಗ್ಯೂ ಕರೆದುಕೊಂಡು ಹೋಗುತ್ತೇನೆ. ನಿನಗೆ ಆದರ ಸಂಶಯುವೇ ಬೇಡ. ಇದೂ ಆ ಗಿಡದ ಬುಡಕ್ಕೆ ನಡೆ; ಬೆಳಗಿನಿಂದ ನೀನು ಏನೂ ಫಲಾಹಾರ ಮಾಡಿದಂತೆ ಕಾಣುವದಿಲ್ಲ. ಅದಕ್ಕೆಂದೇ ಆಗಲೇ ನಿನಗೆ ಕಣ್ಣಿಗೆ ಕತ್ತಲೆ ಬಂದಿರಬೇಕು. ನಿನಗೆ ಏನಾದರೂ ನಾನು- ತಿನ್ನಲು ಕೊಡುವೆನು.

**ಸಖೂದೇವಿ**—ಬೇಡಮ್ಮಾ- ಬೇಡ- ನನಗೆ- ಫಲಹಾರ ಬೇಡ; ಮತ್ತೇನೂ ಬೇಡ. ಗಿರಿಜಾಬಾಯಿಯವರೇ ನಾನು ಹೋಗುತ್ತೇನೆ. ಎಲ್ಲಿಯತನಕ ನಾನು ಅತ್ತೆಯ ಮನೆಯಲ್ಲಿರುವೆನೊ, ಅಲ್ಲಿಯತನಕ ಅತ್ತೆ-ಮಾವಂದಿರ— ಪತಿಯ ಸೇವೆಯನ್ನು ಮಾಡುವೆನು. ನಾಳೆ ನಿಮ್ಮೊಡನೆ ಬಂದಾಗ- ಪಂಢರಿನಾಥನನ್ನುಳಿದು ನನಗೆ ಬೇರೆಯವರ ಚಿಂತೆ ಎಲ್ಲಿ? ನಾಳೆ ಬೆಳಗ್ಗೆ ನಾನು ಬಂದೇ ತೀರುತ್ತೇನೆ.

ಪದ—ರಾಗ

ರಾಗ ಖಮಾಜ ತಾಳ ಝಂಪಾ.

**ಹರಿನಾಮಸುಧಾಪಾನವನು ನಾನಿರುತ ಮಾಳ್ಪೆ । ಪ । ತೊರೆದಿಹೆನು ಪಸಿವು ತೃಷೆ ।**
**ಹರಿ ನಿನ್ನ ಭಜಿಸುವೆ ಕರುಣಾಬ್ಧಿ ಸೋಮಾ ರಮೇಶಾ ಪೊರೆ ॥ ೧ ॥**

(ಹೋಗುವಳು)

**ಗಿರಿಜಾಬಾಯಿ**—(ವಿಶ್ವನಾಥಬಟ್ಟರಿಗೆ) ದಾಮಾಜೀಪಂತರ ಮಗಳು— ಸಖೂದೇವಿಗೆ- ನಾನು- ಅವಳನ್ನು ಪಂಢರಪುರಕ್ಕೆ ಕರೆದುಕೊಂಡು ಹೋಗುತ್ತೇನೆಂದು ವಚನ ಕೊಟ್ಟಿದ್ದೇನೆ.

**ವಿಶ್ವನಾಥ ಭಟ್ಟ**—ಅವಳನ್ನು ನೀನು- ಹೇಗೆ ಕರೆದುಕೊಂಡು ಹೋಗುವೆ?

**ಗಿರಿಜಾಬಾಯಿ**— ಹೇಗೆಂದರೆ— ನಾವು ಹೇಗೆ ಹೋಗುವೆವೋ ಅವಳೂ ಹಾಗೆ ಬರುವಳು.

**ವಿಶ್ವನಾಥ ಭಟ್ಟ**—ಅದೆಲ್ಲ ಸರಿ. ಅವಳು ತನ್ನ ಅತ್ತೆ ಮಾವಂದಿರಿಗೆ- ತನ್ನ ಗಂಡನಿಗೆ- ತಿಳಿಸಿ ಬರುವಳೊ, ಅಥವಾ ತಿಳಿಸದೇ ಬರುವಳೊ ?

**ಗಿರಿಜಾಬಾಯಿ**—ಅವಳು ಹೇಗಾದರೂ ಬರಲಿ; ಅದರ ಗೊಡವೆ

ನಮಗೇಕೆ? ಆವಳನ್ನು ನಮ್ಮ ಸಂಗಡ ಕರೆದುಕೊಂಡು ಹೋಗು ತ್ತೇನೆಂದು, ನಾನು ವಿಠ್ಠಲನ ಪ್ರತ್ಯಕ್ಷ ಹೇಳಿದ್ದೇನೆ.

**ವಿಶ್ವನಾಥ ಭಟ್ಟ**—ಏನೇ ಅವಳ ಅತ್ತೆಯು ಬಹಳ ಕೆಟ್ಟವಳು! ಅವ ಳನ್ನು ಬಹಳ ಪೀಡಿಸುತ್ತಾಳೆಂದು-ನಿನ್ನೆ ಮಧ್ಯಾನ್ಹ ದೇವಾಲ ಯಕ್ಕೆ ಬಂದ ಜನರು ಹೇಳುತ್ತಿದ್ದುದನ್ನು ನೀನು ಕೇಳಿಲ್ಲವೆ? ಅಂದಮೇಲೆ ಸಖೂದೇವಿಯನ್ನು ಪಂಢರಪುರಕ್ಕೆ ಹೋಗಲು ಅವಳು ಸಂತೋಷದಿಂದ ಹೇಗೆ ಒಪ್ಪಿಗೆ ಕೊಡುವಳು? ಅಷ್ಟೇ ಅಲ್ಲ- ಪಂಢರಪುರಕ್ಕೆ ಹೋಗುವ ಸಮಾಚಾರ-ಅವಳಿಗೆ ತಿಳಿದರೆ, ಅವ ಳನ್ನು ಹೆಚ್ಚು ಪೀಡಿಸಲು ಪ್ರಾರಂಭ ಮಾಡಬಹುದು; ಮತ್ತು ಹುಡುಗಿಯನ್ನು ನಾವು ಓಡಿಸಿಕೊಂಡು ಹೋಗುತ್ತೇವೆಂದು, ಸರ ಕಾರಕ್ಕೆ ತಿಳಿಸಿ, ನಮ್ಮನ್ನು ಬಂಧನದಲ್ಲಿಡುವಂತೆ ಮಾಡಬಹುದು; ಆಗ ನಮ್ಮ ಸಂಕಟವನ್ನು ಯಾರು ಬಿಡಿಸುವರು? ನೀವು ಹೆಂಗ ಸರು ನಿಮಗೇನು ತಿಳಿಯುವದಿಲ್ಲ! ನಾವು ಯಾತ್ರಿಕಾರರು; ನಮ ಗೇಕೆಬೇಕು ಈ ಪೇಚಾಟ!

**ಗಿರಿಜಾಬಾಯಿ**—ಹೀಗೆಲ್ಲ ಮಾತಾಡಿದರೆ ಏನಂತೆ! ದಾಮಾಜೀ ಪಂತರ ಮಗಳೆಂದರೆ, ನಮ್ಮ ಮಗಳಿದ್ದ ಹಾಗೆಯೇ! ಸರಕಾರ ದವರು ಬರಲಿ; ಅಂದರೆ ಅವರಿಗೆ- ತಾನೇ ಗೊತ್ತಾಗುವದು! ಚಂಡಿಕಾಬಾಯಿಯ ಸ್ವಭಾವ!

**ವಿಶ್ವನಾಥ ಭಟ್ಟ**—ನಿನ್ನ ಮನಸ್ಸಿಗೆ ಬಂದಂತೆ ಮಾಡು. ಸರಕಾರದವರು ಬಂದು ಕೇಳಿದರೆ- ಅವರಿಗೆ ನಿನ್ನನ್ನೇ ತೋರಿಸುತ್ತೇನೆ.

(ಭಜನೆ ಪ್ರಾರಂಭವಾಗುವದು.)

**ಎಲೆ ಮನವೆ ನೀ ನೆನೆಯೋ ವಿಠ್ಠಲನ ॥ ಅಳಿಯದ ಘನಪದ ಕೊಡುವನು ತಾನೆ ॥ ಪಲ್ಲ ॥ ಆರಿಗು ಸ್ಥಿರವಲ್ಲಿದು ಜಡದೇಹ। ಸಾರುವೆ ನರನೆ ವಿಚಾರಿಸಿ ನೋಡೈ ॥೧॥ ಸತಿಸುತ ಮೋಹಕೆ। ಅತಿಮರುಳಾಗಿ। ಕ್ಷಿತಿಯೊಳು ಚರಿಸದೆ ಹರಿಯನು ಭಜಿಸೋ ॥ ೨ ॥**

—ಪರದೆ ಬೀಳುವದು—

# ೫ ನೇ ಪ್ರವೇಶ

(ಸ್ಥಳ:—ಗದಾಧರಪಂತರ ಮನೆ. ಭಕ್ತಿ ಪರವಶತೆಯಿಂದ ಸಖೂದೇವಿಯು ದೇವರ ನಾಮ ಹಾಡುತ್ತ ಬೀಸುತ್ತಿದ್ದಾಳೆ.)

ರಾಗ ಆನಂದಭೈರವಿ.

**ಧ್ರುವಬಾಲಕನ ಸದ್ಭಾವಕೆ ನೀನೊಲಿದೆ । ಸ್ಥಿರಪದ ದೊಳಿರಿಸಿದೆಯೋ ಕರಿರಾಜನು ತಾ । ಸಾರಿ ಭಜಿಸೆ ನಿನ್ನ ತ್ವರಿತದಲಿ ಪಾಲಿಸಿದೆ ॥ ಸತಿ ದ್ರೌಪದಿಯ । ನಿತ್ಯಕಾಯ್ದೆ ದೇವಾ । ಕಷ್ಟಗಳ ಪರಿಹರಿಸಿ ॥ ಪುಂಡಲೀಕ ವರದಾಹರಿ ವಿಠ್ಠಲಾ ಭಕ್ತವರಾ ಸಿರಿಲೋಲಾ ॥ ೧ ॥**

**ಸಖೂದೇವಿ**— ಅಂತೂ ಆಯಿತಮ್ಮಾ ಈ ಬೀಸೋಣ. ಅತ್ತೆಯವರು ಹೇಳಿದ ಯಾವತ್ತು ಕಾರ್ಯಗಳು ಮುಗಿದವು. ನಿತ್ಯದಂತೆ ಉಡ ಸಾರಣೆ ಮುಗಿಸಿಕೊಂಡು— ಉಪಕರಣೆಗಳನ್ನು ತಿಕ್ಕಿ ದೇವರ ಮನೆಯಲ್ಲಿಡಬೇಕು; ಮತ್ತು ಸ್ನಾನಕ್ಕೆಂದು ನದಿಗೆ ಹೋದವಳು, ತಿರುಗಿ ಬರಬಾರದು; ಹಾಗೇ ಅವರೊಡನೆ ಪಂಢರಪುರಕ್ಕೇ ಹೋಗಿ ಬಿಡಬೇಕು. ಭಗವಂತಾ ನಾನೀಗ ಮಾಡುವದು ಸರಿಯಾದದ್ದೇ; ನಿನ್ನ ಪಾದಗಳನ್ನುಳಿದು ನನಗ ಬೇರೆ ದಾರಿಯಾವುದಿನ್ನು! ನಿನ್ನ ಪಾದಗಳ ಮೇಲೆ ತಲೆಯನ್ನಿಡಬೇಕು— ಅದೇ ನನಗೆ ಮುಖ್ಯವಾದ ಕರ್ತವ್ಯ! ಅದೇ ನನಗೆ ಶುಭದಿನ. ಭಗವಂತಾ— ಇಂದಿನ ವರೆಗೆ ನಾನು— ಯಾವುದೇ ಕೆಲಸ ಮಾಡಿದರೂ, ನಿನ್ನನ್ನು ಸ್ಮರಿಸದೇ ಮಾಡಿಲ್ಲ; ಯಾರ ಮನಸ್ಸನ್ನೂ ನೋಯಿಸಲಿಲ್ಲ; ಅತ್ತೆಯವರ ಮಾತನ್ನು ಮೀರಲಿಲ್ಲ; ಈಗ ಫಂಢರಪುರಕ್ಕೆ ನೀನಾಗಿಯೇ ಕರೆದೊಯ್ಯುತ್ತಿರುವೆ; ಅಂದಮೇಲೆ ನೀನೇ ನನಗೀಗ ಗತಿಯೆಂದು ನಂಬಿದರೆ—ಅದರಲ್ಲಿ ದೋಷವೇನು ಬಂತು? ಆದರೆ ಪತಿಗೆ— ಅತ್ತೆ ಮಾವಂದಿರಿಗೆ ತಿಳಿಸದೇ ಹೋಗುವದು ತಪ್ಪು ಮಾಡಿದಂತಲ್ಲವೆ? ನಾನಿಲ್ಲದ್ದನ್ನು ನೋಡಿ, ಅವರು ಮತ್ತಾವ ಪಾಪದ ಕಲ್ಪನೆಯನ್ನು ಮಾಡುವರೋ! ನನ್ನನ್ನು ಕಂಡಕೂಡಲೇ ಪತಿಯು ಬೇಸರಿಯುವರು; ಅತ್ತೆಯವರು ದಿನಾಲು ಪಂಢರಪುರಕ್ಕೆ ಹೋಗು— ಹೋಗು— ಎನ್ನುತ್ತಿರುವರು; ಆದರೆ ಆವರ ಅಪ್ಪಣೆ

ಇಲ್ಲದೇ ಹೋಗುವದು ಸತೀ ಧರ್ಮಕ್ಕೆ ವಿರೋಧವಲ್ಲವೆ? ಸತಿಗೆ—ಪತಿಯೇ ಪರದೈವವಲ್ಲವೆ? ಸತಿಯು ಪಾದಸೇವೇಯೇ ಸತಿಗೆ ಸದ್ಗತಿಯ ದಾರಿ; ಅಂದವೇಲೆ ಅಂಥ ಪಾದಗಳನ್ನು ತೊಲಗಿ ಹೋಗುವದೆಂದರೆ, ಯೋಗ್ಯವೆ? ಯಾಕ ಯೋಗ್ಯವಲ್ಲ? ಪತಿದೇವನನ್ನು ಬಿಟ್ಟು—, ಪಂಢರಿನಾಥನ ಪಾದಗಳನ್ನು ಹಿಡಿಯ್ತುತ್ತೇನೆ! ಈ ದೇವರನು ಬಿಟ್ಟು, ದೇವಾದಿದೇವನನ್ನು ಸೇವಿಸ್ತುತ್ತೇನೆ! ಇದರಲ್ಲಿ ಯೇನು ತಪ್ಪು ಬಂತು! ಪತಿವ್ರತಾ ಧರ್ಮಕ್ಕೇನೂ ಸ್ವಲ್ಪ ಕುಂದು ಬರುತ್ತದೆ: ಹೀಗಾಗಿ ನಾನೇನು ಮಾಡಲಿ! ನನ್ನ ದೇವರು— ನನ್ನ ಸೇವೆಯನ್ನು ಸ್ವೀಕರಿಸುವದಿಲ್ಲ; ನನ್ನ ಕೂಡ ಸ್ನೇಹನಾದ ತ್ರಾತೆ [illegible] ದೇವಾಧಿದೇವನು ತಾನಲ್ಲ: ತನ್ನವರನ್ನು ಅವನು— ಬಿಟ್ಟಿರಲಾರನು; ಅಂಥವನ ಪಾದಗಳನ್ನು ಹಿಡಿದರೆ, ಅದರಲ್ಲಿ ದೋಷವೇನು ಬಂತು? ಛೇ— ಅದೇನು ಇಲ್ಲ! ಪಾಂಡುರಂಗಾ— ನಾನು ನಿನ್ನ ಪಾದ ಸನ್ನಿಧಾನಕ್ಕೆ ಬರತಕ್ಕವಳೆ! ಈಗ ಪತಿಯ ಪಾದಗಳ ಕೊನೆಯ ದರ್ಶನವನ್ನು ತಕ್ಕೊಂಡು— ಹೋಗೋಣ.

ಕಂದ

**ಪತಿಯಾಶ್ರಯವೆನಗಿಲ್ಲವೋ ॥ ಹಿತದಿಂ ಪ್ರೀತಿಸುವ ತಂದೆತಾಯಿಗಳಿಲ್ಲವೋ ॥**
**ಪತಿತ ಜನಾಪದ್ಬಾಂಧವಾ ॥ ಗತಿನಿನ್ಹೊರತು ಅನ್ಯರಾರೋ ಪಂಢರಿನಾಥಾ ॥ ೧ ॥**

(ಪರವೇ ಏಳುವದು. ಮಾಧವನ ಶಯ್ಯಾಗಾರ. ಮಾಧವನು ಮಲಗಿರುವನು)

ದೇವಾ! ಪಾಂಡುರಂಗಾ— ಈ ಚರಣಗಳನ್ನು ಅಗಲಿ— ನಾನು ಹೋಗಲೆ! ನಿನ್ನ ಚರಣ ಸನ್ನಿಧಾನಕ್ಕೆ ಬರಲೆ! ಮೊದಲು ಈ ಚರಣಗಳಿಗೆ ನಮಸ್ಕಾರ ಮಾಡುವೆನು! (ನಮಸ್ಕರಿಸುವಳು) ಅತ್ತೆಯವರ ಆಜ್ಞೆಯಿಲ್ಲದೇ, ಈ ಚರಣಗಳನ್ನು ಬಿಟ್ಟು ನಿನ್ನ ಸನ್ನಿಧಿಗೆ ಬರಲಿ! ಛಿ. ಅದು ಸತೀ ಧರ್ಮಕ್ಕೆ ತೀರ ವಿರುದ್ಧವು! ಇಲ್ಲ— ಭಗವಂತಾ ನಾನು ನಿನ್ನ ಸನ್ನಿಧಾನಕ್ಕೆ ಬರುವದೇ ಇಲ್ಲ! ಇವರು ನನಗೆ ಎಷ್ಟೇ ಒದೆತ ಹಾಕಿದರೂ, ಇವರ ಚರಣಗಳೇ ನನಗೆ ಗತಿ: ಎಂಥ ಕಷ್ಟಗಳೊದಗಿದರೂ ಸಹಿಸಿಕೊಂಡಿರುವದೇ

ನನ್ನ ಕರ್ತವ್ಯ. ಇವರಿಗೀಗ ನಿದ್ರೆಹತ್ತಿದೆ. ಪಾದಸೇವೆ ಮಾಡಿದರೆ ಇವರ ನಿದ್ರಾ ಭಂಗವಾದೀತೆ? ಆಗಲಿ- ಪಾದಸೇವೆಯನ್ನಂತೂ ಮಾಡೋಣ— (ಕಾಲು ಒತ್ತುವಳು)

ರಾಗ ಪೀಲು, ತಾಳ ತ್ರಿವಟ.

**ಪತಿಪದ ಸೇವೆಯೇ ಕಾಶಿ ಸತಿಗೆ। ಪತಿಪಾದೊದಕ ಗಂಗಾಸ್ನಾನಾ। ಜಗದೆ ॥ಪಲ್ಲ॥ ಪತಿದರ್ಶನವೇ ವಿಠ್ಠಲಧ್ಯಾನ। ಪತಿಜಪವೇ ಅನುಷ್ಠಾನಾ। ದೇವಾ ಏತಕೆ ಯಾತ್ರೆ ಏತಕೆ ತೀರ್ಥ ॥ ಪತಿವಚನವಿದೇ ಸತಿಗೆ ವಿನೋದ ॥ ೧ ॥**

ಈ ಪಾದಗಳು ದೊರಕಿದಮೇಲೆ- ಕಾಶಿ ಏಕೆ- ಪಂಢರಪುರವೇಕೆ?

(ಒಳಗೆ ಚಂಡಿಕಾಬಾಯಿಯು ಗರ್ಜಿಸುತ್ತಾಳೆ)

**ಚಂಡಿಕಾ**—(ಒಳಗಿನಿಂದ) ಮಾಧವಾ- ಎಲೋ ಮಾಧವಾ- ನಿನ್ನ ಕೋಣೆಯಲ್ಲಿ ಬಂದವರು ಯಾರೋ ಅವರು! ಆಗಲೇ ನನಗೆ ಹೊಳೆಯಿತು- ಈ ಚಂಡಾಲಿಯು ಏನಾದರೂ ಘಾತಮಾಡುವಳೆಂದು! ಮಾಧವಾ. ಎಲೋ ಮಾಧವಾ. ಬಾಗಿಲನ್ನು ತೆಗೆ-! (ಬಾಗಿಲಕ್ಕೆ ಧಕ್ಕೆ ಹೊಡೆದು ಪ್ರವೇಶಿಸುವಳು. ಸಖೂದೇವಿಯು ಗಾಬರಿಯಾಗಿ ನಿಲ್ಲುವಳು) ಏನೂ- ಬಾಗಿಲವನ್ನೂ ಹಾಕಿಕೊಂಡಿಲ್ಲವೆ? ನೀನು- ಖಂಡಿತವಾಗಿ ಬಜಾರಿಯೇ- ಸರಿ. ಯಾರ ಅಪ್ಪಣೆ ಪಡೆದು ನೀನು ಈ ಕೋಣೆಯನ್ನು ಪ್ರವೇಶಿಸಿದೆ? ಇವನೇ ಕರೆದನೋ, ಅಥವಾ ನೀನೆ ಬಂದೆಯೋ?

**ಮಾಧವ**—(ಗಾಬರಿಯಿಂದ) ಇಲ್ಲ. ಇಲ್ಲ. ಅಮ್ಮಾ ನಾನು ಕರೆದಿಲ್ಲ. ಇವಳು ಯಾವಾಗ್ಗೆ ಬಂದಳೋ ಏನೋ!

**ಚಂಡಿಕಾ**—ಏನೇ ಖೋಡೀ- ಮೇಲೆ ಮೇಲೆ ಭಕ್ತಿಯ ಸೋಗನ್ನು ತೋರಿಸುವಿ, ಆದರೆ ನಿನಗೆಕ್ಕೇ ಪತಿಯ ಸಹವಾಸ! ಮೊದಲು ನನ್ನ ಮನೆಬಿಟ್ಟು ಹೊರಡು! ಇಂಥ ಅವಿಚಾರತನವು ನನ್ನ ಮನೆಯಲ್ಲಿ ನಡೆಯಲಾರದು! ಎಲೊ ಮೂರ್ಖಾ- ಏನು ನೋಡುತ್ತ ನಿಂತೆ, ಇವಳಿಗೆ ಚೆಂಡಿಗೆ ಕೈಕೊಟ್ಟು- ನಿನ್ನ ಕೋಣೆಯಿಂದ ಹೊರಗೆ ಹಾಕು! ನೀನು ಹಾಗೆ ಮಾಡದಿದ್ದರೆ, ಇವಳಿಗೆ ನಿನ್ನ ಸಲಿಗೆ ಇರುವದೆಂದು ನಾನು ತಿಳಿಯುವೆನು!

**ಮಾಧವ**—ಅಮ್ಮಾ ಇದೋ ನೋಡು; ಅವಳು ನನ್ನ ಕೋಣೆಗೆ ಬಂದರೆ, ಅದರಲ್ಲಿ ತಪ್ಪೇನಾಯಿತು?

**ಚಂಡಿಕಾ**—ಮೂರ್ಖ ನನಗೆ ತಿರುಗಿ ಉತ್ತರ ಕೊಡುವಿಯಾ? ಇವಳನ್ನು ಮೊದಲು ಮನೆಯಿಂದ ಹೊರಗೆ ಹಾಕಿ- ಆಮೇಲೆ ನಿನಗೆ ಉತ್ತರ ಕೊಡುತ್ತೇನೆ; ಮತ್ತು ನನ್ನ ಕೈ ತೋರಿಸುತ್ತೇನೆ. (ಸಖೂದೇವಿಯನ್ನು ಹೊಡೆಯುತ್ತ- ದಬ್ಬುತ್ತ ಮನೆಬಿಟ್ಟು ಹೊರಗೆ ಹಾಕುವಳು)

(ಪರದೆ ಬೀಳುವದು)

---

## ೬ ನೇ ಪ್ರವೇಶ.

(ಸ್ಥಳ:—ಗದಾಧರಪಂತರ ಮನೆಯ ಒಂದು ಭಾಗ. ಮಾಧವನು ಸಚಿಂತನಾಗಿ ಪ್ರವೇಶಿಸುವನು)

**ಮಾಧವ**—(ಸ್ವಗತ) ಈ ದಿವಸದ ಅನ್ಯಾಯ ಶಿಖರಕ್ಕೇ ಮುಟ್ಟಿತು. ಅಪರಾಧವೇನು- ಅದಕ್ಕೆ ಶಾಸನವೆಂಥದು! ಅವಳು ನನ್ನ ಶಯ್ಯಾಗಾರಕ್ಕೆ ಬಂದರೆ- ಅದರಲ್ಲೇನು ತಪ್ಪು! ನಾನಾದರೂ ಈ ತಾಯ ಆಜ್ಞೆಯನ್ನು ಎಲ್ಲಿಯತನಕ ಪಾಲಿಸುವದು; ಅದಕ್ಕೂ ಒಂದು ಮರ್ಯಾದೆ ಇರುವದಲ್ಲವೇ? ಊರ ಜನ ನಮ್ಮ-ಸಂಸಾರವನ್ನು ನೋಡಿ ನಗೆಯಾಡುತ್ತಾರೆ; ಎದುರಿಗೇ ಚೇಷ್ಟೆಮಾಡುತ್ತಾರೆ! ಹೌದು ಇದೇ ನಿಶ್ಚಯ. ಇನ್ನು ಮುಂದೆ ಈ ತಾಯಿಆಜ್ಞೆಯನ್ನು ನಾನು ಕೇಳುವದಿಲ್ಲ. ಇದೇ ನಿಶ್ಚಯ—

ರಾಗ ಅಡಾಣ, ತಾಳ ತ್ರಿವಟ

**ಎಂದಿಗೆ ಮನೋತಾಪ ಪೋಗುವದೋ ಕಾಣೆ ॥ ಎಂದು ಸುಖಿಪೆ ತಿಳಿಯೇ ॥ ಪಲ್ಲ ॥**
**ಈ ಕ್ರೂರಮಾತೆಯ ಕೃತಿಯನೋಡಿ ವ್ಯಾಕುಲನಾಗಿ ಪೋದೆ ॥ ೧ ॥**

ನಾನೇನೋ ನಿಶ್ಚಯ ಮಾಡಿದೆ; ಆದರೆ ಅಮ್ಮನನ್ನು ಕಂಡಕೂಡಲೇ ನಮ್ಮ ಕೈಕಾಲುಗಳೇ ನಡುಗಹತ್ತುತ್ತವೆ; ಅದಕ್ಕೇನು ಮಾಡಬೇಕು. (ವಿಚಾರ ಮಾಡಿ) ಒಳ್ಳೇದು ಇವಳಾದರೂ ತನ್ನ ಹಟವನ್ನೇಕೆ ಬಿಡಬಾರದು! ಪಂಥರಪುರದ ಯಾತ್ರಿಕಾರರನ್ನು ನೋಡಿದ

ಕೂಡಲೇ ನಮ್ಮ ತಾಯಿಯ ತಲೆ ತಿರುಗಿ ಹೋಗುವದು. ಅಂಥ ವರ ಕೂಡ ಇವಳಾದರೂ ಏಕೆ ಮಾತಾಡಬೇಕು! ನಮ್ಮ ತಾಯಿ ಯೆನೂ ವಿನಾಕಾರಣ ಪೀಡಿಸುವದಿಲ್ಲ; ಆದರೂ ಇಷ್ಟು ಪೀಡಿಸು ವದು ವಿಹಿತವಲ್ಲ!

ರಾಗ ಖಮಾಜ, ತಾಳ ಪಂಜಾಬಿ.

**ಮಾತೆಯು ಕಠೋರತನಕೆ ಚಿತ್ತದೊಳು ಭ್ರಾಂತನಾದೆ ॥ ಪಲ್ಲ ॥ ಇಂತು ಮನದಿ ಮಹಾ । ಸಂತಾಪದಿ ॥ ಚಿಂತಿಸೆನನುದಿನ ಸ್ವಾಂತದಿ ಯೋಚಿಸೆ ॥ ೧ ॥**

**ಮಾಧವ**—ನಮ್ಮ ತಾಯ ಹೃದಯ– ಛೆ ಅದು ಹೃದಯವೇ ಅಲ್ಲ! ಅದು ಪಾಷಾಣವೇ! ಮಲಗುವದಕ್ಕೆ ಇವಳಿಗೆ ಸರಿಯಾದ ಹಾಸಿಗೆ ಇಲ್ಲ; ಹೊಟ್ಟೆಗೆ ಸರಿಯಾದ ಆಹಾರವಿಲ್ಲ; ಕಣ್ಣತುಂಬ ನಿದ್ರೆ- ಕೂಡ ಮಾಡಗೊಡದೆ– ಅವಳನ್ನು ಇನ್ನೂ ಅರ್ಧರಾತ್ರಿಯಲ್ಲಿಯೇ ಎಬ್ಬಿಸಿ ಬೀಸುವದಕ್ಕೆ ಹಚ್ಚುವಳು. ಮೊನ್ನೆ ಬೀಸುತ್ತ ಬೀಸುತ್ತ ಅವಳು ನಿದ್ರೆ ತಡೆಯಲಾರದೇ– ಹಾಗೇ ಅಲ್ಲಿಯೇ ಉರುಳಿಕೊಂಡಿ ದ್ದಳು. ನಾನು ಕಾಲು ಸಪ್ಪಳಮಾಡದಂತೆ ಮೆಲ್ಲನೇ ಅವಳ ಹತ್ತಿರ ಹೋಗಿ, ನನ್ನ ಹತ್ತಿರ ಕರೆದುಕೊಂಡು ಬರಬೇಕೆಂದು ಅವಳ ಹತ್ತಿರ ಹೋದೆ. ಆಗ ನಮ್ಮ ತಾಯಿಗೆ ನಿದ್ರೆ ಹತ್ತಿತ್ತು, ಸಮಯವೂ ಚನ್ನಾಗಿತ್ತು; ಆದರೆ ಏನು ಮಾಡುವದು; ನಮ್ಮ ಸವಾರಿಯು ಅವಳ ಸಮೀಪಕ್ಕೆ ಹೋಗಿ ಅವಳನ್ನು ಮುಟ್ಟಿ ಎಬ್ಬಿ ಸುವಷ್ಟರಲ್ಲಿ;– ಒಳಗಣಿಂದ "ಯಾಕೆ– ಬೀಸುವ ಸಪ್ಪಳ ಕೇಳಿ ಸುವದಿಲ್ಲ" ಎಂದು ತಾಯ ಗರ್ಜನೆ ಕೇಳಿದಕೂಡಲೇ ನಮ್ಮ ಅವ ಸ್ಥೆಯನ್ನು ದೇವರೇ ಬಲ್ಲ; ಎಡವುತ್ತ ಮುಗ್ಗರಿಸುತ್ತ ನಮ್ಮ ಹಾಸಿ ಗೆಯನ್ನು ಕಾಣಬೇಕಾದರೆ ಸಾಕುಬೇಕಾಗಿ ಹೋಯಿತು! ಈ ದಿವಸ– ಏನು ಬೇಕಾದ್ದು ಆಗಲಿ– ತಾಯ ಮಾತನ್ನು ಕೇಳುವಂತಿಲ್ಲ. ಈಗಿಂದೀಗಲೇ ಹೋಗಿ, ಅವಳನ್ನು ಹುಡುಕಿಕೊಂಡು ಬರು ತ್ತೇನೆ. ಅವಳು ಇಲ್ಲಿಯೇ ಎಲ್ಲಿಯಾದರೂ ನಿಂತಿರಬಹುದು. ಹಿತ್ತಲ ಬಾಗಿಲಿನಿಂದ ಹೋಗಿ ಅವಳನ್ನು ಹುಡುಕಿಕೊಂಡು ಬರು ವೆನು. (ಬಾಗಿಲ ತೆರೆಯುವನು. ಎದುರಿಗೇ ಪದ್ಮಾವತಿಯು ಬರುವಳು)

ಯಾರದು–! ಪದ್ಮಾವತೀ ಇಷ್ಟು ಬೆಳಗ್ಗೆ ನೀನು ಎಲ್ಲಿಗೆ ಹೋಗಿದ್ದೆ?

**ಪದ್ಮಾವತಿ**—ಇಲ್ಲಿಗೇ ಬಂದೆನು. ಬೆಳಗ್ಗೆ ಏನೋ ಗದ್ದಲ ಕೇಳಿಸಿತು. ಅದೇನು ಎಂಬುದನ್ನು– ತಿಳಿಯೋಣವೆಂದು– ಬಂದೆನು!

**ಮಾಧವ**—ಗದ್ದಲ ಗಿದ್ದಲ– ಎಲ್ಲಿಯದು? ಇಷ್ಟರಲ್ಲಿ ನಮ್ಮ ಮನೆಯಲ್ಲಿ ನಡೆದದ್ದು– ನಿಮ್ಮ ಮನೆಗೆ ತಿಳಿಯಿತೆ?

**ಪದ್ಮಾವತಿ**—ತಿಳಿಯದೇ ಹೇಗಿದ್ದೀತು! ಅನುಸೂಯೆಯು ಇದೇ ಈಗ ಈ ಸಮಾಚಾರವನ್ನು– ಕಾವೇರಿಯ ಅತ್ತೆಯ ಮುಂದೆ ತಿಳಿಸಿದಳು. ಕಾವೇರಿಯ ಅತ್ತೆಯು ನಮ್ಮ ಅತ್ತೆಯ ಮುಂದೆ ಹೇಳಿದರು. ನನಗೆ ಮನೆಯ ಮುಂದಿನ ಬಾಗಿಲು ಮುಚ್ಚಿದಂತೆ ಕಾಣಿಸಿತು; ಆದಕ್ಕೆಂದು ಹಿಂದಿನ ಬಾಗಿಲಿನಿಂದ ಬಂದೆನು.

**ಮಾಧವ**—ಹಾಗಾದರೆ– ನಿನಗೆ ಮುಂಚೆಯ ಬಾಗಿಲಿನ ಹತ್ತಿರ ಯಾರೂ ಕಾಣಿಸಲಿಲ್ಲವೆ?

**ಪದ್ಮಾವತಿ**—ಮುಂಚೆಯ ಬಾಗಿಲಿನ ಹತ್ತಿರ ಯಾರೂ ಕಾಣಿಸಲಿಲ್ಲ; ಮತ್ತೂ ನಾನು ಕೂಡ ಅಷ್ಟು ಲಕ್ಷ್ಯಕೊಟ್ಟು ನೋಡಲಿಲ್ಲ; ಹಾಗೇ ಬಂದೆನು!

**ಮಾಧವ**—ಏನೇ ನಿನಗೆ ಅವಳು— ಅವಳು— ಕಾಣಿಸಲಿಲ್ಲವೆ?

**ಪದ್ಮಾವತಿ**—ಅವಳು— ಅವಳು— ಅಂದರೆ ಯಾರು?—

**ಮಾಧವ**—ಅವಳು ಅಂದರೆ— ಇವಳು! ಇಷ್ಟೂ ನಿನಗೆ ತಿಳಿಯುವದಿಲ್ಲವೇ?

**ಪದ್ಮಾವತಿ**—ಓಹೋ ಅವಳು ಅಂದರೆ, ಸಖೂದೇವಿಯೋ! ನನಗೆ ಅವಳು ಕಾಣಿಸಲಿಲ್ಲ ಬಿಡು.

**ಮಾಧವ**—ಹಾಗಾದರೆ ಅವಳು ಎಲ್ಲಿಗೆ ಹೋಗಿರಬಹುದು!

**ಪದ್ಮಾವತಿ**—ಇಲ್ಲಿಯೋ ಎಲ್ಲಿಯಾದರೂ ಹೋಗಿದ್ದಾಳು– ವಿಠ್ಠಲನ ಭಜನೆ ಮಾಡುತ್ತ. ಅವಳಿಗೆ ಬೇರೆ ಕೆಲಸವೇನಿದೆ. ತಪ್ಪಾಯಿತೆಂದು ಅತ್ತೆಯ ಕಾಲು ಹಿಡಿದುಕೊಂಡರಾಯಿತು; ಅದನ್ನು ಬಿಟ್ಟು– ಚಂಡಿಕಾಬಾಯಿಯನ್ನೆ ನಿಂದೆ ಮಾಡುತ್ತ ಪೂರೆಲ್ಲ ಸುತ್ತುತ್ತಾಳೆ.

ವೂರ ಜನರಿಗೇನು ತಿಳಿಯುವದು! ಅವರು ನಿಮ್ಮನ್ನೇ ದೂರು ವರು. ಅವಳಿಗೆ– "ಅಯ್ಯೋ ಪಾಪ– ಗಂಡನು ಅತ್ತೆಯೂ ಎಷ್ಟು ಗೋಳಾಡಿಸುತ್ತಾರೆ!" ಎಂದು ಅನ್ನು ವರು. ಸ್ವಲ್ಪ ಮನೆಯಲ್ಲಿ ರಸಿಕಸಿ ಆಯಿತೋ ಅದನ್ನು ಹೇಳಿದಳೇ ತನ್ನ ಗೆಳತಿಯರಿಗೆ—! ಆವರು ಅದನ್ನು ವೂರೆಲ್ಲ ಪಸರಿಸುತ್ತಾರು.

**ಮಾಧವ**—ಆದರೆ— ಪದ್ಮಾವತೀ ಅವಳು ಈಗ ಎಲ್ಲಿ ಹೋಗಿದ್ದಾಳು! ಜೀವಕ್ಕೆ ಏನಾದರೂ ಅಪಾಯ ಮಾಡಿಕೊಂಡರೆ—

**ಪದ್ಮಾವತಿ**—ಇದೇನು ಮಾಧವರಾಯಾ— ಈ ದಿನ ನೀನು ಯಾಕೊ ಬೇರೆಯುವನಂತೆ ಕಾಣುತ್ತೀ— ?

**ಮಾಧವ**—ಪದ್ಮಾವತೀ ಹಾಗೇನೂ ಇಲ್ಲ. ಏನೇ– ನೀನು ಬೇಗನೇ ಹೋಗಿ, ಅವಳ ಸಮಾಚಾರವನ್ನು ತಿಳಿದುಕೊಂಡು ಬರು ವಿಯಾ?— ಇದೋ ನೋಡು– ನಾನು ಹೀಗೆ ಹೇಳಿದೆನೆಂದು ಅಮ್ಮನಿಗೆ ಹೇಳಿಯೇ ಮತ್ತೆ!—

**ಪದ್ಮಾವತಿ**—ಅಂತೂ ಇವತ್ತು ನಿನ್ನ ಸ್ಥಿತಿ ಬೇರೆಯಾದಂತೇ ಆಗಿದೆ– ಅಂತೂ ಸಖೂದೇವಿಯ ವರ್ತಮಾನವನ್ನು ಅಮ್ಮನಿಗೆ ತಿಳಿಸದೇ ನಿನಗೆ ತಿಳಿಸಲೇ—

**ಮಾಧವ**—ಅವಳಿಗೆ ಸಮಾಧಾನದ ನಾಲ್ಕು ಶಬ್ದಗಳನ್ನು ಹೇಳಿ, ಕರೆ ದುಕೊಂಡು ಬಂದರೆ ಬಹಳ ನೆಟ್ಟಗಾಗುತ್ತದೆ; ಮತ್ತು ನಾನು ನಿನ್ನನ್ನು ಕಳಿಸಿಕೊಟ್ಟೆನೆಂದು ಅವಳಿಗೆ ಹೇಳು!

**ಪದ್ಮಾವತಿ**—ಬೇಷ– ಬೇಷ– ಬಹಳ ಚನ್ನಾಗಿದೆ! ಈ ದಿವಸ ಸಖೂ ದೇವಿಗೆ ವಿಠ್ಠಲನೇ ಪ್ರತ್ಯಕ್ಷನಾದನು; ಯಾಕಂದರೆ– ಚಂಡಿಕಾ ಬಾಯಿಗೆ ತಿಳಿಸದೇ– ನೀನು—

**ಮಾಧವ**—(ಮೆಲ್ಲಗೇ) ಪದ್ಮಾವತೀ ಸುಮ್ಮನೇ ಕೂಗಿಮಾತಾಡಬೇಡ ತಾಯೀ, ಎಲ್ಲಿಯಾದರೂ ಅಮ್ಮನಿಗೆ— ಕೇಳಿಸೀತು! ಹೋಗು ಅವಳನ್ನು ಕರೆದುಕೊಂಡು ಬಾ— (ಅವಳು ಹೋಗುವದಿಲ್ಲವೆಂದು ತಲೆ ಯನ್ನು ಅಲ್ಲಾಡಿಸುವಳು) ಯಾಕೆ ಹೋಗುವದಿಲ್ಲವೇ? ನನ್ನ ಮಾತನ್ನು

ಕೇಳುವದಿಲ್ಲವೆ? ಬಿಡು! ನಾನೇ ಹೋಗಿ ಸ್ವಸ್ಥವಾಗಿ ಮಲಗಿಕೊಳ್ಳುವೆನು (ಹೋಗುವನು)

**ಪದ್ಮಾವತಿ**—(ಸ್ವಗತ) ಇವತ್ತಿನ ದಿವಸ ಇವನ ಮನೊವೃತ್ತಿಯಲ್ಲಿ ಏನೋ ಹೆಚ್ಚುಕಡಿಮೆಯಾಗಿರಲೇ ಬೇಕು. ತರುಣ ವಯಸ್ಸು; ತಾಯ ಆಜ್ಞೆಯಲ್ಲಿ ಎಷ್ಟು ದಿನ ತಾನೇ ಇದ್ದಾನು; ಆದರೆ ಈ ಪ್ರಸಂಗದಲ್ಲಿ ನಾನು ಸುಮ್ಮನೆ ಕುಳಿತರೆ ಉಪಯೋಗವಿಲ್ಲ; ಈಗ ಹೊತ್ತಿದ ಅಗ್ನಿಯಲ್ಲಿ ಎಣ್ಣೆಸುರುವಿ, ಅದನ್ನು ಹೆಚ್ಚು ಪ್ರಜ್ವಲಿಸಬೇಕು! ಪ್ರಾಯಶಹ ಈಗ ಸಖೂದೇವಿಯು ಅಲ್ಲಿಗೇ ಹೋಗಿರಬೇಕು. ಕೇಳುವೆದೇನು- ಎಲ್ಲ ಸಂವಿಧಾನಗಳೂ ನಾನು ಹೇಳಿದಂತೆ ತಾನೇ ಕೂಡಿ ಬರುವವು— (ಹೋಗುವಳು)

---

## ೭ ನೇ ಪ್ರವೇಶ

(ಸ್ಥಳ—ನದಿಗೆ ಹೋಗುವ ಮಾರ್ಗ— ಸಖೂದೇವಿ ಒಬ್ಬಳೆ ಬರುವಳು)

**ಸಖೂದೇವಿ**—ಪಾಂಡುರಂಗಾ

ರಾಗ ಮುಲ್ತಾನಿ, ತಾಳ ತ್ರಿವಟ.

**ತವಪಾದವೆ ಗತಿ ಎನಗೆ ಮುಕುಂದಾ। ತವೆ ಪ್ರೀತಿಪ ಮಾತಾಪಿತರು। ಪೋದರು ಹಾ ದೇವಾ ಕಾಯೋ॥ ಪಲ್ಲ॥ ನಾ ಪತಿದೇವಗೆ ಅಪ್ರಿಯಳಾದೆ। ಅಪರಾಧವನೇಂ ಕಾಣೆ॥ ೧॥**

ಭಗವಂತಾ ನನ್ನನ್ನು- ಎಂಥ ತೊಡಕಿನ ಸನ್ನಿವೇಶದಲ್ಲಿ ತಂದು ಚೆಲ್ಲಿದೆ. ನನಗೆ ಯಾವುದೂ ತಿಳಿಯದಂತಾಗಿದೆ. ಮೊದಲು ನಿನ್ನ ಪಾದ ಸನ್ನಿಧಾನಕ್ಕೆ ಬರಬೇಕೆಂದು ನಿಶ್ಚಯ ಮಾಡಿದೆ. ಪತಿಯ ಚರಣಗಳ ಕೊನೆಯ ದರ್ಶನಕ್ಕೆ ಹೋದೊಡನೇ ಮನಸ್ಸು ತಿರುಗಿತು. ನಾನು ಮಾಡುವದು ಸತೀ ಧರ್ಮಕ್ಕೆ ವಿರುದ್ಧವೆಂದು ಹೊಳೆಯಿತು; ಮೊದಲಿನ ವಿಚಾರವನ್ನು ನಿಲ್ಲಿಸಿದೆನು. ಪತಿಯ ಪಾದಸೇವೆಯೇ- ಕಾಶಿಯಾತ್ರೆ- ಪಂಢರಪುರದ ಯಾತ್ರೆ ಮಾಡಿದಂತೆ ಎಂದು- ಮನಸ್ಸಿಗೆ ಬೋಧೆ ಮಾಡಿಕೊಂಡೆನು; ಆದರೆ ಅತ್ತೆ

ಯವರಿಗೆ ನಾನು ಮಾಡುವದು ಪಾಪದ ಕೆಲಸವೆಂದು ತೋರಿತು. ಅವರು ನನ್ನನ್ನು ಮನೆಬಿಟ್ಟು ಹೊರಗೇ ಹಾಕಿದರು. ಇನ್ನು ನನಗೆ ಬೇರೇ ವಿಚಾರವೇ ಇಲ್ಲ. ನಿನ್ನ ಚರಣಗಳೇ ನನಗೆ ಗತಿ- !

(ಕಾವೇರಿ- ಅನುಸೂಯಾ— ಬರುವರು.)

**ಕಾವೇರಿ**—ಸಖೂದೇವೀ ನಿನ್ನನ್ನು ಎಂಥ ಶಬ್ದಗಳಿಂದ ಸಂತೈಸೋಣ. ಈ ದಿನ ಬೆಳಗ್ಗೆ ನಡೆದದ್ದನ್ನು- ಅನುಸೂಯೆಯು- ತನಗೆ ತಿಳಿಸಿದ ಕೂಡಲೇ ನನಗೆ ಬಂದು ತಿಳಿಸಿದಳು. ಕೂಡಲೇ ಮನೆಯವರ ಭಯವನ್ನು ಲೆಕ್ಕಿಸದೇ ನಿನ್ನನ್ನು ಹುಡುಕುತ್ತ ಬಂದೆವು.

**ಸಖೂದೇವಿ**—ಕಾವೇರೀ- ಅನುಸೂಯಾ- ನನಗಾಗಿ- ನೀವು. ಅದೆಷ್ಟು ಒದ್ದಾಡುತ್ತೀರಿ! ನೀವೇ ನನಗೆ ಜೀವದ ಗೆಳತಿಯರು. ನನ್ನ ಕಷ್ಟವನ್ನು ನಿಮ್ಮ ಮುಂದಲ್ಲದೇ ಮತ್ತಾರ ಮುಂದೆ ತೋಡಿಕೊಳ್ಳಲಿ?— ಇಂದು ನಮ್ಮ ನಿಮ್ಮ ಭೆಟ್ಟಿಯು ಕೊನೆಯದು. ಇದನ್ನು ಒದಗಿಸಿ ಕೊಟ್ಟುದಕ್ಕಾಗಿ ನಾವು ಆ ಭಗವಂತನ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಮೆಯೇ!—

**ಅನುಸೂಯಾ**—ಕೊನೆಯ ಭೆಟ್ಟಿಯೇ!- ಇಂಥ ಮಾತುಗಳನ್ನೇಕೆ ಆಡುತ್ತೀ ತಾಯೀ !

**ಸಖೂದೇವಿ**—ಗೆಳತಿಯರೇ ಇಂದು ನಾನು ನಿಮ್ಮನ್ನಗಲಿ ಹೋಗುವೆನು. ನನ್ನ ಅತ್ತೆಯವರು ನನ್ನನ್ನು ಮನೆ ಬಿಟ್ಟು ಹೊರಗೆ ಹಾಕಿದರು. ಪಂಢರಪುರಕ್ಕೆ ಹೋಗಬೇಕೆಂಬ ನನ್ನ ಬಹಳ ದಿನದ ಆಕಾಂಕ್ಷೆಯು ಈ ದಿವಸ ಸಫಲವಾಗುವ ಚಿನ್ಹವು ಕಾಣುತ್ತದೆ. (ಹಿಂದಿನಿಂದ ಪದ್ಮಾವತಿಯು ಬಂದು ಒಂದು ಬದಿಗೆ ಮರೆಯಾಗಿ ನಿಲ್ಲುವಳು) ನಾನು ಇಂದು ಹೊರಡುತ್ತೇನೆ. ಅದೊ ಅಲ್ಲಿ ಆ ಗಿಡದ ಬುಡಕ್ಕೆ ನನ್ನ ತಂದೆಯ ಸ್ನೇಹಿತರಾದ ವಿಶ್ವನಾಥಭಟ್ಟರು- ಮತ್ತು ಅವರ ಹೆಂಡತಿಯಾದ ಗಿರಿಜಾಬಾಯಿಯರಿರುವರು. ಅವರು ತಮ್ಮ ಸಂಗಡ ನನ್ನನ್ನು ಪಂಢರಪುರಕ್ಕೆ ಕರೆದುಕೊಂಡು ಹೋಗುತ್ತೇನೆಂದು ಹೇಳಿದ್ದಾರೆ. ನೀವು ನನ್ನನ್ನು ಮರೆಯಬೇಡಿ. ಪಂಢರಪುರಕ್ಕೆ ಹೋದನಂತರ ದೇವರಿಗೆ ಕರುಣೆ ಬಂದು ನನಗೂ

ನನ್ನ ತಾಯಂತೆ ತನ್ನ ಹತ್ತಿರ ಪಾದಸನ್ನಿಧಿಗೆ- ಕರೆದೊಯ್ದರೆ, ನಾನು ಭಾಗ್ಯಶಾಲಿಯೇ ಸರಿ; ಹಾಗಾಗದ ಪಕ್ಷದಲ್ಲಿ ಇಡೀ ಜನ್ಮ ಶ್ರೀ ಪಂಢರಿನಾಥನ ನಾಮಸಂಕೀರ್ತನ ಮಾಡುತ್ತ- ಪಂಢರ ಪುರದಲ್ಲಿಯೇ ಕಾಲಕಳೆಯುತ್ತೇನೆ.—

**ಪದ್ಮಾವತಿ**—(ಸ್ವಗತ) ಇದೊಳ್ಳೇ ಚೆನ್ನಾದ ಕೆಲಸವಾಯಿತು. ನಾನೀಗಲೇ ಹೋಗಿ ಈ ಸಮಾಚಾರವನ್ನು ನಮ್ಮಮ್ಮನಿಗ ತಿಳಿಸಲೇಬೇಕು. ಇಷ್ಟೊತ್ತಿನತಕ ಮಾಡಿದ ಸಾಹಸವು ವ್ಯರ್ಥವಾಗಲಿಲ್ಲ.

**ಸಖೂದೇವಿ**—ಹಾಗಾದರೇ- ನಾವಿನ್ನು ಹೋಗೋಣವೇ! ನಾನಿನ್ನು ಆ ಯಾತ್ರಿಕಾರರಿದ್ದೆಡೆಗೆ ಹೋಗುವೆನು. ನಿಮಗೆ ಹೊತ್ತಾಯಿತು. ನೀವು ಮನೆಗೆ ಹೋಗಿರಿ. ನಿಮ್ಮ ಭೆಟ್ಟಿಯಾದಂತೆ ಪದ್ಮಾವತಿ ಅತ್ತಿಗೆಯವರ ಭೆಟ್ಟಿಯೂ ಆಗಿದ್ದರೆ, ಒಳ್ಳೆದಾಗುತ್ತಿತ್ತು; ಏನು ಮಾಡುವದು; ಅವರಿಗೆ- ನಾನು ಮಾಡುವದೇ ಮನಸ್ಸಿಗೆ ಬರುವದಿಲ್ಲ.

**ಗಿರಿಜಾಬಾಯಿ**—(ಪ್ರವೇಶಿಸಿ) ಸಖೂ- ನಾವು ನಿನ್ನ ದಾರಿಯನ್ನು ಬಹಳೊತ್ತಿನಿಂದ ನೋಡಿದೆವು. ನೀನು ಬರಲಿಲ್ಲ. ದೇವಾಲಯಕ್ಕೆ ಬಂದಿದ್ದೆ, ನಿನ್ನ ಭೆಟ್ಟಿಯಾಯಿತು. ಯಾಕೆ ನೀನು ನಮ್ಮೊಡನೇ ಬರುವಿಯಲ್ಲವೇ?—

**ಸಖೂದೇವಿ**—ಬರುತ್ತೇನೆ. ಅದಕ್ಕೆಂದೇ ಈ ವಿಠ್ಠಲನು ಮತ್ತು ನಾನು- ಒಂದು ಹೆಜ್ಜೆ ಮುಂದಿಟ್ಟಿದ್ದೇವೆ.

**ಗಿರಿಜಾಬಾಯಿ**—ನಡೆ ಹಾಗಾದರೆ ದೇವರ ದರ್ಶನ ಪಡೆದುಕೊಂಡು- ನಾಮಸ್ಮರಣೆ ಮಾಡುತ್ತ ನಾವು ಮುಂದೆ ಸಾಗೋಣ.

**ಸಖೂದೇವಿ**—ಒಳ್ಳೇದು ಮೈತ್ರಿಣಿಯರೇ ನಾನಿನ್ನು ಬರಲೇ- ನಿಮ್ಮ ಪ್ರೀತಿ- ನನ್ನ ಮೇಲೆ, ಇದೇ ರೀತಿ ಇರಲಿ. ಶ್ರೀ ವಿಠ್ಠಲನು ಈ ಮೊದಲು ನಿಮ್ಮನ್ನು ಹೇಗೆ ಸುಖದಿಂದ ಇಟ್ಟನೋ ಹಾಗೆಯೇ ಮುಂದೂ ಇಡುವನು; ಆದರೆ ನೀವು ಮಾತ್ರ ಅವನ ನಾಮಸಂಕೀರ್ತನವನ್ನು ತಪ್ಪಿಸಬೇಡಿರಿ. ಏಕಾಂತದಲ್ಲಿಯೂ- ಲೋಕಾಂತ

ದಲ್ಲಿಯೂ ಅವನ ನಾಮಸ್ಮರಣೆ ನಡೆದೇ ಇರಲಿ. ನೀವು ಎಂದಾದರೂ ಪಂಢರಪುರಕ್ಕೆ ಬಂದರೆ, ಅಲ್ಲಿ ನಾನು ಬದುಕಿದ್ದರೆ– ನನ್ನ ಭೆಟ್ಟಿಯಾದೀತು !

**ಕಾವೇರಿ**—ಸಖೂದೇವೀ ನಮ್ಮ ಗಂಟಲು ಕಟ್ಟಿಕೊಂಡಿವೆ; ಮಾತು ಬರಲೊಲ್ಲವು.

**ಅನುಸೂಯಾ**—ಗಿರಿಜಾಬಾಯೀ– ಸಖೂದೇವಿಯ ಷ್ಟು ಕಷ್ಟವನ್ನು ಈ ಜಗತ್ತಿನಲ್ಲಿ ಯಾರೂ ಅನುಭವಿಸಲಾರರು– ಅವಳನ್ನು ನೀವು ಜೋಕೆಯಿಂದ ನೋಡಿಕೊಳ್ಳಿರಿ.

**ಸಖೂದೇವಿ**—ಗೆಳತಿಯರೇ—

ಸೂರಮಲ್ಹಾರ, ತಾಳ ತ್ರಿವಟ.

**ನಾ ಪೋಗಿ ಬರುವೆನು ಪ್ರಿಯಸಖಿಯರೇ ಸಹಿಸೆ ಅನುತಾಪ ॥ ಪಲ್ಲ ॥ ನಿಮ್ಮಯ ಪ್ರೇಮ ಸ್ಮರಿಸೆ ಮನಕೆ ಭಾರಿ ವಿಷಾದವು ॥ ವಿಮಲೆ ಸಹಿಸೆನೆ ॥ ೧ ॥**

(ತೆರೆ ಬೀಳುವದು)

---

## ೮ ನೇ ಪ್ರವೇಶ.

(ಸ್ಥಳ—ಕರ್ಹಾಡದಿಂದ ಪಂಢರಪುರಕ್ಕೆ ಹೋಗುವ ರಸ್ತೆ. ವಿಶ್ವನಾಥಭಟ್ಟರ ಮೇಳ ಭಜನೇ ಮಾಡುತ್ತಿದ್ದಾರೆ. ಸಖೂದೇವಿಯೂ ಇದ್ದಾಳೆ.)

(ಚಂಡಿಕಾಬಾಯಿಯು ಕೋಪದಿಂದ ಪ್ರವೇಶಿಸುವಳು. ಸಂಗಡ ಮಾಧವ, ಪದ್ಮಾವತಿಯರಿರುವರು)

**ಚಂಡಿಕಾ**—ಮೂರ್ಖಾ ಏನು ನೋಡುವೆ ! ಬೆನ್ನಮೇಲೆ ನಾಲ್ಕು ಬಡಿಕೆ ಕೊಟ್ಟು, ಮುಡಿಯನ್ನು ಹಿಡಿದು, ಎಳೆದಾಡುತ್ತ ಅವಳನ್ನು– ಮನೆಗೆ ತೆಗೆದುಕೊಂಡು ಹೋಗು. ನನಗೆ ಎಂಥ ಮಗ ಹುಟ್ಟಿದೆಯೋ ನೀನು ! ಪ್ರತ್ಯಕ್ಷ ಹೆಂಡತಿಯು ಇನ್ನೊಬ್ಬನ ಕೈಹಿಡಿದು ಓಡಿ ಹೋಗುತ್ತಿರುವದನ್ನು– ಕಣ್ಣಿನಿಂದ ನೋಡುತ್ತ– ಶುಂಭನಂತೆ ಹಾಗೇ ನಿಂತಿರುವೆ! (ಮಾಧವನು ಸಖೂದೇವಿಯನ್ನು ಹೊಡೆಯುತ್ತ ದಬ್ಬಿಕೊಂಡು ಹೋಗುವನು) ಮನೆತನದ ಹುಡುಗಿಯರನ್ನು

ಓಡಿಸಿಕೊಂಡು ಹೋಗುವದಕ್ಕೆಂದೇ ನೀವು ಯಾತ್ರೆಯ ನೆವ ಹುಡುಕಿದ್ದೀರಾ! ನಾಚಿಕೆಯಾಗುವದಿಲ್ಲವೇ ನಿಮಗೆ!

**ವಿಶ್ವನಾಥ ಭಟ್ಟ**—ತಾಯೀ ಸುಮ್ಮನೆ ನಮ್ಮನ್ನೇಕೆ ದೂಷಿಸುವೆ? ತಾನಾಗಿಯೇ ಅವಳು ನಮ್ಮ ಜೊತೆಗೆ ಬರುತ್ತೇನೆಂದಳು; ನಾವು ಆಗಲಿ ಎಂದೆವು; ಇದರಲ್ಲಿ ನಮ್ಮದೇನು ತಪ್ಪು.

**ಚಂಡಿಕಾಬಾಯಿ**—ಸಾಕು. ಸಾಕು. ನಿನ್ನ ಸಂಭಾವಿತತನದ ಸೋಗು. ನಿಮ್ಮಂಥವರಿಗೆ ನಾಲ್ಕು ಒದಿಕೆ ಬಿದ್ದಾಗಲೇ ಬುದ್ಧಿ ಬರುವದು. ಇಲ್ಲದ್ದೊಂದು ಹೇಳಿ, ಅವಳ ಮನಸ್ಸನ್ನು ನೀವು- ಕೆಡಿಸದೇ ಇರದಿದ್ದರೆ- ಅವಳು ನಿಮ್ಮೊಡನೆ ಬರುವದಕ್ಕೇಕೆ ಒಪ್ಪುತ್ತಿದ್ದಳು; ಮತ್ತು ಇದಕ್ಕೆಲ್ಲ ಕಾರಣ- ಇದೊ- ಈ ವೃದ್ಧ ಕುಂಟಲಗಿತ್ತಿಯು!

**ಗಿರಿಜಾಬಾಯಿ**—ವಿಠ್ಠಲ. ವಿಠ್ಠಲ. ಎಂಥ ಮಾತಾಡುವಿ ತಾಯೀ—!

**ಚಂಡಿಕಾಬಾಯಿ**—ನೋಡಿದಿಯಾ ಮೇಲೆ ಮೇಲೆ ಹೇಗೆ ಸೋಗು ಮಾಡುತ್ತಾಳೆ. ಒಳ್ಳೇ ಸಮಯಕ್ಕೆ ಪದ್ಮಾವತಿಯು ಮನೆತನಕ ಬಂದು ಸುದ್ದಿಯನ್ನು ತಿಳಿಸಿದಳು; ಇಲ್ಲವಾದರೆ, ಅವಳು ಇವರ ಬೆನ್ನು ಹತ್ತಿ ಹೋಗಿಯೇ ಬಿಡುತ್ತಿದ್ದಳು. ಪದ್ಮಾವತೀ ಬೇಗನೇ ಮನೆಗೆ ಹೋಗೋಣ ನಡೆ; ಯಾಕಂದರೆ, ಒಳ್ಳೇ ಗಟ್ಟಿಯಾದ ಚರ್ಮದ ಬಾರಿನಿಂದ ಅವಳನ್ನು ಕತ್ತಲ ಕೋಣೆಯ ಕಂಭಕ್ಕೆ ಕಟ್ಟಿಹಾಕಬೇಕು; ಅಂದರೇ ಅವಳ ಸೊಕ್ಕಮುರಿಯುವದು. (ವಿಶ್ವನಾಥ ಭಟ್ಟರಿಗೆ) ಈ ಮುತ್ತೈಳರಿಗೇನು ಬೇರೆ ಉದ್ಯೋಗ; ತಾನಾಗಿಯೇ ಬಂದು ಬೀಳಬೇಕು. ಬಾಯಲ್ಲಿ- ಶಗಣಿ! ಮನೆತನದ ಹುಡುಗಿಯರನ್ನು ಓಡಿಸಿಕೊಂಡು ಹೋಗುತ್ತೀರಾ—! ತಡೆಯಿರಿ- ಸರಕಾರಕ್ಕೆ ತಿಳಿಸಿ, ನಿಮಗೆ ಚನ್ನಾದ ಶಾಸನ ಮಾಡಿಸುತ್ತೇನೆ: ಪಂಢರಪುರದ ಯಾತ್ರೆ- ಇಲ್ಲಿಯೇ ಆಗುವಂತೆ ಮಾಡಿಸುತ್ತೇನೆ.

**ವಿಶ್ವನಾಥ ಭಟ್ಟ**—(ಗಿರಿಜಾಬಾಯಿಗೆ) ನೋಡಿದೆಯಾ— ಇದೆಲ್ಲ ನಿಮ್ಮ ಬುದ್ಧಿಯ ಸೂಟೆ! ನಾನು ನಿನಗೆ ಮೊದಲೇ ಹೇಳಲಿಲ್ಲವೆ. ಹೂ

ಇನ್ನು ಇಲ್ಲಿ ಹೊತ್ತು ಕಳೆದು ಉಪಯೋಗವಿಲ್ಲ. ನಾವು ಕೂಡಲೇ ಇಲ್ಲಿಂದ ಕಾಲು ಕಿತ್ತಲೇ ಬೇಕು! ವಿಠ್ಠಲ! ವಿಠ್ಠಲ!

—ಪದ—

**ದಾಸನೀನೆಂದೆನಿಸೋ ವಾಸೂದೇವನ ಭಜಿಸೋ । ಪ । ಆಸೆಯಿಂದಲಿ । ಕಾಸಿಗೆ ಮೋಹಿಸಿ । ಕ್ಲೇಶಕೆ ಗುರಿ ನೀನಾಗದಿರೋ ॥ ೧ ॥ ದೊರೆಯದ ಮಾನವ ಜನ್ಮ ॥ ದೊರಕಿಹುದೋ ನಿನಗೀಗ । ಗರುವತನದೊಳಾಚರಿಸದೆ ಸಂತತ । ಹರಿಯನು ಭಜಿಸಿ ಸಾರ್ಥಕನಾಗೋ ॥ ೨ ॥ ಕರುಣಾಳು ಹರಿ ತಾನು । ದುರಿತನಾಶವಗೈವಾ ॥ ಮರುಳನೆ ನಿನ್ನಯ ತಾಪತ್ರಯ ॥ ಪರಿಹರಿಸುವನೋ ವಿಠ್ಠಲನು ॥ ೩ ॥**

(ಎಲ್ಲರೂ ಹೋಗುವರು)

## ಪ್ರಥಮಾಂಕ ಸಂಪೂರ್ಣಂ

# ೨ನೇ ಅಂಕ

## ೧ನೇ ಪ್ರವೇಶ

(ಸ್ಥಳ:— ಗದಾಧರ ಪಂತರ ಮನೆಯ ಕತ್ತಲ ಕೋಣೆ. ಸಖೂದೇವಿಯನ್ನು ಕಂಭಕ್ಕೆ ಕಟ್ಟಿದ್ದಾರೆ. ಆರ್ತಳಾಗಿ ಸಖೂದೇವಿಯು ಮೇಲೆ ನೋಡುತ್ತಿದ್ದಾಳೆ.)

**ಸಖೂದೇವಿ**—(ಸ್ವಗತ) ದೇವಾ ಪಾಂಡುರಂಗಾ. ನನ್ನನ್ನು ಇದೇ ರೀತಿಯಾಗಿ ಕಷ್ಟದಲ್ಲಿಡಬೇಕೆಂದು ನಿನಗೆನಿಸುವದೆ? ನನ್ನ ಅಳಲು ನಿನಗೆ ಕೇಳಿಸುವದಿಲ್ಲವೇ—

ರಾಗ ಪೂರ್ವಾ, ತಾಳ ತ್ರಿವಟ

**ಶ್ರೀರಮಣೀಕರ ಪಂಕಜ ಪೂರಿತ। ಚಾರುತ ರಾಂಗಾ ಸುರಮುನಿ ಗಣಾರ್ಚಿತ। ಸುರಚಿರ ವಾಮನ ರೂಪಾ । ಪಲ್ಲ । ವಿಮಲ ತುಲಸೀಮಾಲಾ। ಸುಮನಸವಂದಿತ। ಕೋಮಲ ಶಾಮಲ ಗಾತ್ರಂ ನಮಿತ ಜನಾಶ್ರಿತ ಪಾಪಹರಂ। ಸುಮನೋಹರ ಪಾವನಚತರಿಂ॥**

ಅಮ್ಮಯ್ಯಾ ಹಗ್ಗವು ಮಾಂಸದಲ್ಲಿ ನೆಟ್ಟು, ಚೇಳು ಕಡಿದಂತೆ ಉರಿಯುತ್ತಿರುವದು. ದೇವಾ, ನನ್ನ ಪತಿಗೆ ತಿಳಿಸದೆ ನಾನು— ಹೊರಟು ಹೋದೆನೆಂದು, ನನ್ನ ಕರ್ತವ್ಯವನ್ನು ಮರೆತೆನೆಂದು, ನನಗೀ ಶಿಕ್ಷೆಯನ್ನು ವಿಧಿಸಿದೆಯಾ? ಪರಮ ಪುರುಷನಾದ ನಿನ್ನನ್ನರಸಿ ನಾನು ಹೊರಟಿದ್ದೆ, ನೀನು ದೊರಕಿದ್ದರೆ, ನಾನು ವ್ಯಥೆ ಪಡುತ್ತಿರಲಿಲ್ಲ; ಜನ ಎಷ್ಟು ನಿಂದಿಸಿದ್ದರೂ ನಾನು ಲೆಕ್ಕಿಸುತ್ತಿರಲಿಲ್ಲ; ನಿನ್ನ ದರುಶನ ದೊರಕದೇ ನನಗೀ ದುಃಖವು ಬಂದೊದಗಿತು; ಭಗವಂತಾ. ನನಗೆ ನಿನ್ನ ದರುಶನವನ್ನೆಂದಿಗೆ ನೀಡುತ್ತೀ? ನಿನ್ನ ಮೂರ್ತಿಯನ್ನು ಕೈಯಲ್ಲಿ ತಕ್ಕೊಂಡು ನೋಡಿಯೇನೆಂದರೆ— ಶಕ್ತಿಯು ಕುಗ್ಗಿ ಹೋಗಿರುವದು. ಪರಮಾತ್ಮಾ ನನ್ನ ಅವಸ್ಥೆಯನ್ನು ಹೀಗೇಕೆ ಮಾಡಿದೆ! ನೀನು ಮಾಡುವದೇನು; ನಿನ್ನ ಬಿರುದುಗಳೇನು! ರುಕ್ಮಿಣೀ ವಲ್ಲಭಾ—ನನ್ನ ಸಂಚಿತವೇ ನಾಶವಾಗಿರದಿದ್ದರೆ, ನೀನಾದರೂ ಏನು ಮಾಡುವೆ? ಇದೇ ಮನಸ್ಸಿಗೆ

ಸಮಾಧಾನ! (ಚಂಡಿಕಾ ಬಾಯಿಯು ಕೈಯಲ್ಲಿ ಚಿಮಣಿಯನ್ನು ಹಿಡಿದು ಕೊಂಡು ಬರುವಳು. ಸಂಗಡ ಮಾಧವನೂ ಬರುವನು.)

**ಚಂಡಿಕಾಬಾಯಿ**—ಎಲೋ ಆ ಹೆಣ್ಣು ಸಾಮಾನ್ಯವಲ್ಲ; ಮೀರಿದ ಮೋಸಗಾರ್ತಿಯು! ಏನಾದರೂ ಗತ್ತು ಮಾಡಿ, ಓಡಿಹೋದರೆ ಏನು ಮಾಡುವದು? ಅದಕ್ಕೆಂದೇ ಮೇಲಿಂದ ಮೇಲೆ ನೋಡ ಲಿಕ್ಕೆ ಬರುತ್ತಿರುವೆನು. ಮಾಧವಾ ನಾನು ನಿನಗೆ ಆಗಾಗ ಹೇಳು ತ್ತಿರಲಿಲ್ಲವೆ, ಈ ಹೆಣ್ಣನ್ನು ತಲೆಯ ಮೇಲೆ ಏರಿಸಿಕೊಂಡು ಕೂಡ ಬೇಡವೆಂದು; ಆದರೆ ನೀನೆಲ್ಲಿ ಕೇಳುವಿ? ಈಗ ನೋಡು, ನಾನು ಭವಿಷ್ಯ ಹೇಳಿದಂತೇ ಆಯಿತೋ ಇಲ್ಲವೊ! ನನಗೆ ಆಗಲೇ ತಿಳಿ ದಿತ್ತು. ಇವಳು ಎಂದಾದರೂ ಒಬ್ಬ ದಾಂಡಿಗ ಯಾತ್ರಿಕಾರನ ಬೆನ್ನುಹತ್ತಿ ಹೋಗುವಳೆಂದು, ಆದರೆ ನೀನೆಲ್ಲಿ ಕೇಳುವಿ! ಈಗ ನೋಡು ಅದರ ಪರಿಣಾಮ. ಇನ್ನಾದರೂ ನೀನು- ಬುದ್ಧಿ ಕಲಿ! ಮಾಧವನ ಕೈಯಲ್ಲಿ ದೀಪಕೊಡಲು ಹೋಗುವಳು) ಇದೋ ದೀಪವನ್ನು ಹಿಡಿ; ಕೆಳಗೆ ಚಲ್ಲಿಯೇ ಮತ್ತೆ! ಎಚ್ಚರ! (ಮಾಧವನಿಗೆ ಚಿಮಣಿ ಹಿಡಿ ಯಲು ಬರುವದಿಲ್ಲ.) ನೀನೊಬ್ಬ ಅರಿಷ್ಟನೇ ನನಗೆ ಗಂಟುಬಿದ್ದಿರುವೆ!

**ಮಾಧವ**—ಅಮ್ಮಾ ನನಗೆ-ದೀಪ ಹಿಡಿಯಲು, ಸರಿಯಾಗಿ ಬರಲೊ ಲ್ಲದು. ಬೀಗದ ಕೈಯನ್ನು ತಾ—! ನಾನೇ ಬೀಗವನ್ನು ತೆಗೆಯು ತ್ತೇನೆ!

**ಚಂಡಿಕಾಬಾಯಿ**—ಮೂರ್ಖ-ನಿನಗೆ-ಬೀಗದ ಕೈ ಬೇಕೆ? ಹು ಹಿಡಿ ಸುಮ್ಮನೇ ದೀಪವನ್ನು—(ಮಾಧವನು ಸಖೂಬಾಯಿಯನ್ನು ಕನಿಕರದಿಂದ ನೋಡುವನು) ಅವಳ ಕಡೆಗೇನು ನೋಡುವೆ-ಅ-ಎಂದು. ಅವಳಿಗೇ ನಾಗಿದೆ ಧಾಡಿ! [ಸಖೂದೇವಿಗೆ] ನಮ್ಮ ಮೂಗಿಗೆ ಕಪ್ಪು ಹಚ್ಚಿ ಓಡಿ ಹೋಗಬೇಕೆಂದು ಮಾಡಿದ್ದೆಯಲ್ಲವೇ, ಇದೋ ನೋಡು-ಈಗ- ನಿನ್ನ ಮೂಗನ್ನೇ ಸುಡುತ್ತೇನೆ; [ಅವಳ ಮೂಗಿಗೆ ಚಿಮಣಿ ಒಯ್ಯುವಳು] ನಾಲ್ಕು ಮಂದಿಯಲ್ಲಿ-ನಮ್ಮ ಮುಖವನ್ನೆ ಕೆಳಗೆ ಹಾಕಿಸಬೇಕೆಂದು ಮಾಡಿದ್ದೆಯಲ್ಲವೇ; ನೋಡು ನಾನೇ ನಿನ್ನ ಮುಖವನ್ನು ಸುಟ್ಟು ಬಿಡುತ್ತೇನೆ! ಕರೆ-ಈಗ-ಆ-ನಿನ್ನ ಪಾಂಡುರಂಗನನ್ನು-ನೋಡು

ತ್ತೀನೆ-ಅವನು ನಿನ್ನನ್ನು ಹೇಗೆ- ಬಿಡಿಸಿಕೊಂಡು ಹೋಗುತ್ತಾನೆಂಬುದನ್ನು-! ಇದೋ ನೋಡು-ನನ್ನ ಮುಂದೆ ಯಾವ ದೇವನ ಅವತಾರವೂ ನಡೆಯುವದಿಲ್ಲ! ತಿಳಿಯಿತೇನು. ಮಾಧವಾ-ಕನಿಕರದಿಂದ ಅವಳ ಕಡೆಗೇನು ನೋಡುವೆ? ಹಾಕು ನಾಲ್ಕು ಏಟುಗಳನ್ನು-; ಇದೋ- ಮಾಧವಾ- ನೀನು ಇವಳನ್ನು ಬಿಟ್ಟು ಯಾವಳಾದರೂ ಒಬ್ಬ ಸೂಳೆಯ ಸಹವಾಸ ಮಾಡಿದರೆ, ಅದು ನನಗೆ ಸಂತೋಷ; ಆದರೆ ಇವಳು ಬೇಡ ನೋಡು; ಹಾಕು- ನಾಲ್ಕು ಹೊಡೆತ; ಅನುಮಾನ ಮಾಡಬೇಡ-(ಮಾಧವನು ಸುಮ್ಮನೇ ಹೊಡೆದಂತೆ ತೋರಿಸುವನು) ಥೂ-ಹೇಡಿ-ಕೈಲಾಗದ ಗಂಡು ನೀನು! ನನ್ನ ಹೊಟ್ಟೆಯಲ್ಲಿ ಹುಟ್ಟಲು ತಕ್ಕವನಲ್ಲ ನೀನು! ನಾಳೆ ವೈಶಾಖದಲ್ಲಿ ನಿನಗೆ ಎರಡನೇ ಮದುವೆ ಮಾಡಿಯೇ- ತೀರುತ್ತೇನೆ; ಇವಳು ಹಾಗೇ ಬಿದ್ದುಕೊಳ್ಳಲಿ ದಾಸಿಯಂತೆ! ನಡೆ ಹೋಗೋಣ ಇವಳಿಗಾಗಿ ನಾವೇಕೆ ನಿದ್ದೆಗೇಡಾಗಬೇಕು. ನಾಳೆ ಬಂದು ಮತ್ತೆ ನೋಡೋಣ! (ಸಖೂದೇವಿಗೆ) ಕರೆ ಆ ನಿನ್ನ ಪಂಢರಿನಾಥನನ್ನು- ಬರಲಿ-ಅವನ ಸಾಮರ್ಥ್ಯವನ್ನೂ ನೋಡಿಯೇ ಬಿಡುತ್ತೇನೆ.

(ಹೋಗುವರು)

(ಒಮ್ಮೆಲೇ ಗದಾಧರಪಂತರ ಮನೆಯು ಬದಲಾಗಿ-ವೈಕುಂಠವು ಕಾಣುವದು. ಕೃಷ್ಣ-ರುಕ್ಮಿಣಿಯರು ಪ್ರವೇಶಿಸುವರು—)

**ರುಕ್ಮಿಣಿ**—ಇದೇನು ಇಷ್ಟು ಉದ್ವಿಗ್ನರಾಗಿರುವಿರಿ? ಗಡಿಬಿಡಿಯಿಂದ ಎಲ್ಲಿಗೆ ಹೋಗಲು ಸಿದ್ಧರಾಗುವಿರಿ.—?

**ಶ್ರೀಕೃಷ್ಣ**—ರುಕ್ಮಿಣೀ ಏನು ಹೇಳಲಿ ನಿನಗೆ=ನನ್ನ ಪರಮಭಕ್ತೆ ಸಖೂದೇವಿಯು-ನನಗಾಗಿ ಹಂಬಲಿಸುತ್ತಿರುವಳು. ನಾನೀಗಲೇ ಹೋಗಿ ಅವಳನ್ನು ಬಂಧನದಿಂದ ಬಿಡಿಸಬೇಕು.

ಸಂವಾದ

**ರುಕ್ಮಿಣಿ—ಅಗಲಿ ನಾನಿರೆ ಭಗವಂತಾ। ಬಿಡು ನೀ ಚಪಲವಿದೇ ಪ್ರಿಯಕಾಂತಾ॥**

**ಕೃಷ್ಣ—ಮುಗುಧೆ ಯೋಚಿಪೆ ಬರಿದೇಕೆ। ಚಪಲೇ ಛಲವೇಕೆ ಬಿಡು ಕೈಯಾ॥**

**ರುಕ್ಮಿಣಿ—ಬಿಡು ಸಾಕೀ ಮೋಹದ ನುಡಿಯಾ। ನಾ ಬಲ್ಲೆನು ಕಪಟದ ಪರಿಯಾ॥**

**ಕೃಷ್ಣ—ಜಡಜಾಕ್ಷಿ ಕಪಟವಿದಲ್ಲ । ಬಿಡುಬೇಗಾ ಬರುವೆನು ಕೈಯಾ ॥**

**ರುಕ್ಮಿಣಿ—ಅಡಿಗಡಿಗೀಪರಿ ಯೆನ್ನನು ತೊಲಗಿ । ಪೋಗುವರೇ ಧೀಮಂತಾ ॥**

(ಶ್ರೀಕೃಷ್ಣನು ಹೋಗುವನು. ರುಕ್ಮಿಣಿಯು ನೋಡುತ್ತ ನಿಲ್ಲುವಳು. ನೈಕಂಠವು ಬದಲಾಗಿ ಗದಾಧರಪಂತರ ಮನೆ ಕಾಣುವದು. ಗರುಡವಾಹನನಾಗಿ ಶ್ರೀಕೃಷ್ಣನು ಪ್ರವೇಶಿಸುವನು.)

**ಶ್ರೀಕೃಷ್ಣ**—ಗರುಡಾ ನಾನು ಹೇಳಿದಂತೆ ವೇಷಾಂತರಿಸಿಕೊಂಡು ನಾನು ಹೇಳಿದ ಸ್ಥಳದಲ್ಲಿ ಕಾದುಕೊಂಡಿರು. (ಗರುಡನು ಹೋಗುತ್ತಾನೆ.) (ಸಖೂದೇವಿಯನ್ನು ನೋಡಿ) ಆಹಹಾ ನನ್ನ ಭಕ್ತಳು ಇಂತಹ ಸಂಕಟ ಸಮಯದಲ್ಲೂ ನನ್ನ ನಾಮಸ್ಮರಣೆಯಲ್ಲಿ ತಲ್ಲೀನಳಾಗಿರುವಳು. ಇನ್ನೂ ಎಲ್ಲಿಯ ವರೆಗೆ ಸತ್ವಪರೀಕ್ಷೆ ಮಾಡುವದು?

ರಾಗ ಮಾಂಡ, ತಾಳ ಕೇರವಾ

ಲಲನಾಮಣಿ । **ಭೂಲೋಕಸ್ವಾಮಿನಿ ದೇವಿ ॥ ಪಲ್ಲ ॥ ತರುಣಿಯು ಧ್ಯಾನ । ಪರವಶ** ಳಾಗಿ **ಸ್ಮರಿಸುವ ಭಾವಕೆ ನೆರೆ ಬೆರಗಾದೆ ॥ ೧ ॥ ಮರೆಯದೆ ನಾ ನಿಜಭಕ್ತರ ಸಂತಾಪ ಗಳ ॥ ಪರಿಹರಿಸಿ ಪರಿಪಾಲಿಪೆ ಧರಣೀತಲದೆ ॥ ೨ ॥**

ನಮ್ಮ ಚಿರಂಜೀವನಾದ ಬ್ರಹ್ಮನು ಈ ಸೃಷ್ಟಿಯನ್ನು ನಿರ್ಮಿಸಿದಾಗಿನಿಂದ-ಭಕ್ತರಿಗಾಗಿ ನಾವು-ಎಷ್ಟೋ ಅವತಾರಗಳನ್ನು ಧರಿಸಬೇಕಾಯಿತು. ನಮ್ಮ ಹತ್ತು ಅವತಾರಗಳೆಂದರೆ, ನಮ್ಮ ನಾಟಕದ ಹತ್ತು ಅಂಕುಗಳೇ ಸರಿ! ಸಣ್ಣ ಸಣ್ಣ ದೃಶ್ಯಗಳಂತೂ ಎಷ್ಟೋ ಆಗಿವೆ. ಅಂಥದೇ ಇದೊಂದು ಪ್ರವೇಶವು. ಇದಕ್ಕೂ ಮೊದಲು ಒಂದು ಸಲ-ನಾವು-ಸ್ತ್ರೀರೂಪವನ್ನು ಧರಿಸಿದ್ದರಿಂದ ಈಗ ಮತ್ತೆ ಅಂಥ ಪ್ರಸಂಗ ಬಂದಾಗ-ನಮಗೇನು ನಾಚಿಕೆ ಬರುವ ಕಾರಣವಿಲ್ಲ. ಇವಳಿಗೆ ಗಿರಿಜಾಬಾಯಿಯು ಪಂಢರಪುರಕ್ಕೆ ಕರೆದುಕೊಂಡು ಹೋಗುತ್ತೇನೆಂದು ವಚನಕೊಟ್ಟಿದ್ದಳು; ಸರಿ ಮತ್ತೇನು; ಈಗ ನಾನೇ ಗಿರಿಜಾಬಾಯಿಯ ರೂಪತಕ್ಕೊಂಡು ಇವಳನ್ನು ಬಂಧಮುಕ್ತ ಮಾಡಿ- ಗರುಡನ ಜೊತೆಮಾಡಿ, ಪಂಢರಪುರಕ್ಕೆ ಕಳಿಸಬೇಕು. ಗಿರಿಜಾಬಾಯಿಯಾದರೂ ನನ್ನ ಭಕ್ತಳೆ!

ಅವಳ ವಚನವನ್ನು ನಡೆಸುವದಾದರೂ ನನ್ನ ಕರ್ತವ್ಯವು! ಹೂ ಇನ್ನೇಕೆ ತಡ ಧರಿಸು ಹಾಗಾದರೆ ಗಿರಿಜಾಬಾಯಿಯ ವೇಷ!

(ಶ್ರೀಕೃಷ್ಣನು ಅದೃಶ್ಯನಾಗಿ-ಗಿರಿಜಾಬಾಯಿಯ ವೇಷಧರಿಸಿ ದೃಶ್ಯನಾಗುವನು)

**ಗಿರಿಜಾಬಾಯಿ**—(ಸ್ವಗತ) ಈ ಗಿರಿಜಾಬಾಯಿಯ ರೂಪವಂತೂ ನನಗೆ ಚನ್ನಾಗಿ ಶೋಭಿಸುವದು. ಈಗ ಮೊದಲು-ಇವಳನ್ನು-ಬಂಧ ಮುಕ್ತ ಮಾಡೋಣ. (ಸಖೂದೇವಿಯ ಸಮೀಪಕ್ಕೆ ಹೋಗುವನು)

**ಸಖೂದೇವಿ**—(ಸ್ವಗತ) ಆಹಹಾ-ಎಂಥಾ ದಿವ್ಯಪ್ರಕಾಶವಿದು. ಇಷ್ಟರಲ್ಲಿ ಎಲ್ಲಿ ಮರೆಯಾಯಿತು. ಇದಾರ ಕಾಲ ಸಪ್ಪಳವು! ಮತ್ತೆ ಅತ್ತೆಯವರೇ ಬಂದಂತೆ ಕಾಣುತ್ತದೆ; ಆಗಲಿ-ನಾನು ಮೊದಲಿನಂತೆ ಧ್ಯಾನದಲ್ಲಿ ತೊಡಗೋಣ.

**ಗಿರಿಜಾಬಾಯಿ**—(ಬಾಗಿಲು ತೆರೆದು) ಸಖೂದೇವೀ-ಸಖೂದೇವೀ-ಇದೋ ಈಚೆಗೆ ನೋಡು.

**ಸಖೂದೇವಿ**—(ಆಶ್ಚರ್ಯದಿಂದ) ಯಾರು-ಯಾರದು! ಗಿರಿಜಾಬಾಯಿಯವರೇ-ನೀವು ಹೇಗೆ ಇಲ್ಲಿಗೆ ಬಂದಿರಿ? ಪಂಢರಪುರಕ್ಕೆ ಹೋಗಲಿಲ್ಲವೆ? ಅಯ್ಯೋ-ನಮ್ಮ ಅತ್ತೆಯವರು ಸರಕಾರಕ್ಕೆ ತಿಳಿಸಿ, ನಿಮ್ಮನ್ನು ಪಂಢರಪುರಕ್ಕೆ ಹೋಗದಂತೆ ತಡೆಹಾಕಿದರೆ! ಅಯ್ಯೋ ನನಗಾಗಿ-ನಿಮಗೆ-ವಿಶ್ವನಾಥ ಭಟ್ಟರಿಗೆ-ಅದೆಷ್ಟು ತೊಂದರೆಯಾಯಿತು! ವಿಶ್ವನಾಥ ಭಟ್ಟರೆಲ್ಲಿ? ಕಾರಾಗೃಹದಲ್ಲಿರುವರೆ?

**ಗಿರಿಜಾಬಾಯಿ**—ಮೊದಲು ನಿನ್ನನ್ನು ಬಂಧನದಿಂದ ಬಿಡಿಸುತ್ತೇನೆ. ಅಯ್ಯೋ ನೀಚರು-ಎಷ್ಟು ಬಿಗಿಯಾಗಿ ಕಟ್ಟಿದ್ದಾರಮ್ಮಾ—!

ರಾಗ ಭೀಮಪಲಾಸ, ತಾಳ ತ್ರಿವಟ

**ಸಾಧ್ವಿಶಿರೋಮಣಿಯೇ ಕುಮಾರಿ ॥ ಈ ಬಾಧೆ ನೋಡೀ ಮರುಗುವೆ ॥ ಪಲ್ಲ ॥**
**ಕೋಮಲ ಬಾಲೆ । ಈ ಮಹಾತಾಪವ । ಗಮನಿಸದೆ ನೀನನುಭವಿಪೆ ॥ ೧ ॥**

**ಸಖೂದೇವಿ**—ಗಿರಿಜಾಬಾಯಿ-ಮೊದಲು ಹೇಳಿರಿ! ವಿಶ್ವನಾಥ ಭಟ್ಟರೆಲ್ಲಿ? ಕಾರಾಗ್ರಹದಲ್ಲಿಯೆ!

**ಗಿರಿಜಾಬಾಯಿ**—ತಾಯೀ ನೀನೇದಾರೂ ಕಲ್ಪನೆ ಮಾಡಿಕೊಂಡು, ಸುಮ್ಮನೇ ಒದ್ದಾಡುವಿ! ನಮಗೆ ಯಾವ ತೊಂದರೆಯೂ ಆಗಿಲ್ಲ.

ನಾನು-ನಿನಗೆ ಪಂಢರಪುರಕ್ಕೆ ಕರೆದುಕೊಂಡು ಹೋಗುತ್ತೇನೆಂದು ವಚನ ಕೊಟ್ಟಿದ್ದೆನಷ್ಟೇ; ಆ ನನ್ನ ವಚನವನ್ನು ಪೂರ್ತಿಮಾಡುವದಕ್ಕಾಗಿ ನಾನು-ತಿರುಗಿ ಬಂದೆನು—

**ಸಖೂದೇವಿ**—ಅಂದರೆ,—

**ಗಿರಿಜಾಬಾಯಿ**—ಅಂದರೆ—ಹೀಗೆ—ನೀನು ಪಂಢರಪುರಕ್ಕೆ ಹೋಗತಕ್ಕವಳಲ್ಲವೇ! ಅದಕ್ಕೆಂದೇ ನಾನು—ನಿನ್ನನ್ನು ಪಂಢರಪುರಕ್ಕೆ ಕಳಿಸುವ ಏರ್ಪಾಟು ಮಾಡಿದ್ದೇನೆ. ವಚನಕೊಟ್ಟಮೇಲೆ, ಅದನ್ನು ಕೊನೆಗಾಣಿಸಿಯೇ ತೀರುವದು- ನನ್ನ ಸ್ವಭಾವ!

**ಸಖೂದೇವಿ**—ನೀವು ಇಲ್ಲಿಗೆ ಹೇಗೆ ಬಂದಿರಿ? ಅದನ್ನು ಮೊದಲು ಹೇಳಿರಿ!—

**ಗಿರಿಜಾಬಾಯಿ**—ಅದನ್ನೆಲ್ಲ ತೆಗೆದುಕೊಂಡು ನಿನಗೇನು ಮಾಡಬೇಕಾಗಿದೆ. ಅದನ್ನೆಲ್ಲ ಆಮೇಲೆ ಹೇಳಿಯೇನಂತೆ! ಅದಕ್ಕೆಲ್ಲ ಈಗ ವೇಳೆಯಿಲ್ಲ. ಅಯ್ಯೋ ಸಖೂದೇವೀ ಏನೀ ನಿನ್ನ ಅವಸ್ಥೆ; ನಿನ್ನ ತಾಯಿಯು ಇದನ್ನು ನೋಡಿದ್ದರೆ- ಎಷ್ಟು ಗೋಳಾಡುತ್ತಿದ್ದರೊ! ಹೂ ತಡಮಾಡಬೇಡ ಬೇಗನೇ ಹೊರಡು.

**ಸಖೂದೇವಿ**—ಸುಮ್ಮಸುಮ್ಮನೇ ನೀವು ತೊಂದರೆಯಲ್ಲಿ ಬೀಳಬೇಡಿ. ನನಗೆಲ್ಲಿಯ ಪಂಢರಪುರದ ಯಾತ್ರೆ! ತನ್ನ ಪಾದಸನ್ನಿಧಿಗೆ ಕರೆದೊಯ್ಯುವದು ಅವನ ಮನಸ್ಸಿಗೇ ಬಂದಿಲ್ಲ.

**ಗಿರಿಜಾಬಾಯಿ**—ಇದೋ ನೀನು ಹೀಗೆ ಹುಚ್ಚಿಯಂತೆ ಮಾತಾಡಬೇಡ. ಪಂಢರಿನಾಥನ ಮನಸ್ಸಿಗೆ ಬಂದಿದೆಯೆಂದೇ ನಾನು; ಅನೇಕ ತೊಂದರೆಗಳನ್ನು ದೂರಮಾಡಿ, ನಿನ್ನ ಕಡೆಗೆ ಬಂದಿರುವೆನು. ಇನ್ನುಮೇಲೆ ನೀನು-ಸುಮ್ಮನೇ ಹೊತ್ತುಗಳಿಯಬೇಡ ಹೊರಗೆ ನನ್ನ ನಂಬಿಗೆ ಆಳುಮನುಷ್ಯ ಕಾದುಕೊಂಡು ನಿಂತಿದ್ದಾನೆ. ಅವನನ್ನು ನಿನಗೆ ಜೊತೆಮಾಡುತ್ತೇನೆ. ಅವನು ನಿನ್ನನ್ನು ಸಮೀಪದ ಮಾರ್ಗದಿಂದ ಪಂಢರಪುರಕ್ಕೆ ತಲುಪಿಸುವನು.

**ಸಖೂದೇವಿ**—ಅದೆಲ್ಲ ನಿಜ- ಇಂಥ ಅಪರಾತ್ರಿಯಲ್ಲಿ ನೀವು ಇಲ್ಲಿಗೆ ಹೇಗೆ ಪ್ರವೇಶಿಸಿದಿರಿ?

**ಗಿರಿಜಾಬಾಯಿ**— ಇದೋ ನೋಡು. ಹಗಲೆಲ್ಲ ಅದೇ ಪ್ರಶ್ನೆಯನ್ನು ಯಾಕೆ ಕೇಳುತ್ತೀ; ಅದನ್ನು ಹೇಳಲಿಕ್ಕೆ ಇದು ಸಮಯವಲ್ಲ. ನೀನು ಮೊದಲು ಹೊರಡು.

**ಸಖೂದೇವಿ**— ಅಮ್ಮಾ ನನಗೆ ಈಗ ಯಾವುದೂ ತಿಳಿಯದಂತಾಗಿದೆ; ಮತ್ತು ಈ ನಿಮ್ಮ ಉಪಕಾರವನ್ನು ನಾನು ಹೇಗೆ ತೀರಿಸಿಯೇನು!

**ಗಿರಿಜಾಬಾಯಿ**— ಅಮ್ಮಾ ನಿನ್ನ ಉಪಕಾರವೇ ನನ್ನ ಮೇಲೆ ಹೊರಲಾರದಷ್ಟಾಗಿದೆ. ಅದನ್ನು ತೀರಿಸುವದಕ್ಕೆಂದೇ ನಾನು-ಇಲ್ಲಿಯತನಕ ಬಂದೆ!

**ಸಖೂದೇವಿ**— ತಾಯೀ ನನ್ನಿಂದ-ಅಂತಹ ಯಾವ ಉಪಕಾರವು ಆಗಿದೆ?

**ಗಿರಿಜಾಬಾಯಿ**— ಹುಚ್ಚೀ-ಪಿಠ್ಠಲನು ನಿನ್ನ ಭಕ್ತಿಯ ನಿಷ್ಠೆಯನ್ನು ಒರೆಹಚ್ಚಿ ನೋಡಬೇಕೆಂದು-ನಿನ್ನನ್ನು ಚನ್ನಾಗಿ ಪರೀಕ್ಷಿಸಿದನು. ನಿನ್ನ ವಿಷಯದಲ್ಲಿ ಅವನಿಗೆ ನಂಬಿಕೆಯಾಯಿತು. ಅನಂತರ ತಾನು, ಸುಮ್ಮನೇ ಕೂಡುವದೊಳ್ಳೆಯದಲ್ಲವೆಂದು ತಿಳಿದು, ನಿನ್ನನ್ನು ಬಂಧಮುಕ್ತಮಾಡಿ ಪಂಢರಪುರಕ್ಕೆ ಕರೆದೊಯ್ಯುವ ಸದ್ಬುದ್ಧಿಯನ್ನು ನನಗೆ ಕೊಟ್ಟನು; ಹೀಗೇಕೆ ನೀನು ಅರ್ಥಮಾಡಬಾರದು. ಹೂ ಸುಮ್ಮನೇ ನೀನು ವೇಳೆಗಳೆಯಬೇಡ. ನಾನು-ನಿನ್ನ ಸ್ಥಳದಲ್ಲಿ ಕಟ್ಟಿಕೊಂಡು ನಿಲ್ಲುತ್ತೇನೆ. ನಿನ್ನ ಅತ್ತೆ ಹಾಗೂ ಪತಿಯು ಬಂದು ನೋಡಿದಾಗ-ನೀನು ಅಲ್ಲಿಯೇ ಇರುವಿಯೆಂದು ಭಾಸವಾಗಿ ತಿರುಗಿ ಹೋಗುವರು.

**ಸಖೂದೇವಿ**— ಏನಂದಿರಿ! ನನ್ನ ಸ್ಥಳದಲ್ಲಿ ನೀವು ಕಟ್ಟಿಕೊಳ್ಳುವಿರಾ? ಚನ್ನಾಯಿತು. ನಾನು ಪಂಢರಪುರಕ್ಕೆ ಹೋಗುವದೇ ಬೇಡ. ನನ್ನ ಸ್ಥಳದಲ್ಲಿ ನಿಮ್ಮನ್ನು ನೋಡಿದರೆ, ನಿಮ್ಮನ್ನು ಎಷ್ಟು ಪೀಡಿಸುವರೋ ಏನೋ. ಆದರೆ—ಗಿರಿಜಾಬಾಯಿಯವರೇ—ನನಗೆ ಅದೇಕೋ ಇದೆಲ್ಲ ಏನೋ ಅತಿ ಚಮತ್ಕಾರವಾಗಿ ಕಾಣುವದು!

ರಾಗ ಭೀಮಪಲಾಸ, ತಾಳ ಕೇರವಾ

**ಸದಯೆ ಪರೋಪಕಾರೀ ಮಾತೆ। ಮಧು ಮೃದುಲ ವರದ ಲೀಲಾಪಾಣಿ ॥ ಪಲ್ಲ ॥ ಮಹಾ ಸಾಹಸವ ತೋರಿ ಮಾತೆ। ಬಹು ದಿವ್ಯ ಪುಣ್ಯಕಾರ್ಯವಗೈದೆ॥ ಪರಲೋಕದ ದೇವನೇ। ನಿಜದಿ ತವಚಕಿತ ಮಹಿಮೆಗಳ ನೋಡಿ। ತಿಳಿಯದೆ ಭ್ರಾಂತಮತಿಯಾದೆ॥ ಕೇಳೆನ್ನ ಪ್ರೀಯಮಾತೆ ನೀನೇ ॥ ೧ ॥**

**ಗಿರಿಜಾಬಾಯಿ**— ಸಖೂದೇವಿ- ನೀನು ಹೀಗೆ- ಮಾತಿನಲ್ಲಿಯೇ ಹೊತ್ತು ಕಳೆದರೆ, ಈಗ ಬೆಳಗಾಗಿ ಹೋಗುವದು; ಮಾಡಿದ ಎಲ್ಲ ಹಂಚಿಕೆಗಳೂ ನಿರರ್ಥಕವಾಗುವವು. ಒಳ್ಳೇದು— ಹಾಗೇ ತಿಳಿ— ಶ್ರೀವಿಠ್ಠಲನೇ ನನ್ನ ರೂಪ ಧರಿಸಿ ನಿನ್ನ ಸಹಾಯಕ್ಕೆ ಬಂದಿದ್ದಾನೆಂದು! ಈಗಾದರೂ ನಿನ್ನ ಮನಸ್ಸಿಗೆ ಸಮಾಧಾನವಾಯಿತೆ? ಇನ್ನಾದರೂ ಅವಸರ ಮಾಡು.

**ಸಖೂದೇವಿ**— ಗಿರಿಜಾಬಾಯೀ- ನಾನು ಅಂತಹ ಭಾಗ್ಯಶಾಲಿಯೇ—! ತಾಯೇ—ನನ್ನ ಸ್ಥಳದಲ್ಲಿ ನೀವು ಕಟ್ಟಿಕೊಂಡು ನಿಲ್ಲುತ್ತೀನೆಂದು ಹೇಳುತ್ತೀರಿ; ಅದಕ್ಕೆ ನಾನು ಹೇಗೆ ಒಪ್ಪಿಕೊಳ್ಳಲಿ; ನಮ್ಮ ಅತ್ತೆಯವರ ಸ್ವಭಾವ ನೀವೇನು ಬಲ್ಲಿರಿ?

**ಗಿರಿಜಾಬಾಯಿ**— ನನಗೆಲ್ಲ ಗೊತ್ತಿದೆ. ಇದೋ ನೀನು ಇಷ್ಟು ಹಟಮಾರಿಯೆಂಬುದು ನನಗೆ ಮೊದಲೇ ಗೊತ್ತಾಗಿದ್ದರೆ, ನಾನು ಬರುತ್ತಲೇ ಇರಲಿಲ್ಲ. ನಿನಗೆ ನಿನ್ನ ತಾಯಿ-ತಂದೆಯವರ ಸ್ಥಾನ ನೋಡಲಿಕ್ಕೆ ಹೋಗಬೇಕಾಗೆದೆಯಷ್ಟೆ?—

**ಸಖೂದೇವಿ**— ಹೌದು. ಆದರೆ- ಇಲ್ಲಿ ಅವರು- ನಿಮ್ಮನ್ನು ಎಷ್ಟು ಪೀಡಿಸುವರೊ ಏನೊ?—

**ಗಿರಿಜಾಬಾಯಿ**— ಪೀಡಿಸಲಿ. ಪೀಡಿಸಲಿ. ಎಷ್ಟು ಪೀಡಿಸುತ್ತಾರೋ ಅದನ್ನು ನಾನು ನೋಡುವೆನು; ಮತ್ತು ಅದರೊಳಗಿನಿಂದ ಪಾರಾಗುವ ದಾರಿಯನ್ನೂ ನಾನು- ಮಾಡುತ್ತೇನೆ. ನನ್ನ ಸಾಹಸವನ್ನಾದರೂ ನೀನು ನೋಡುವಿಯಂತೆ! ಯಾಕೆ ಬಹಳ ವಿಚಾರದಲ್ಲಿ ಬಿದ್ದಂತೆ ಕಾಣುತ್ತದೆ. ಅತ್ತೆಯ ಕಾಟಕ್ಕೆ ಬೇಸತ್ತು, ಶ್ರೀವಿಠ್ಠಲನ ಮೇಲಿದ್ದ ನಿನ್ನ ಭಕ್ತಿಯು ಹಾರಿಹೋಯಿತೆ? ಹಾಗಿದ್ದರೆ— ಹೇಳು. ನಾನು ಹೊರಟು ಹೋಗುತ್ತೇನೆ.—

**ಸಖೂದೇವಿ**— ಯಾವನಿಗಾಗಿ ನಾನು- ಇವತ್ತಿನ ತನಕ ಅಖಂಡ ಕಷ್ಟದಲ್ಲಿಯೇ ಕಾಲಕಳೆದೆನೋ, ಮತ್ತು ಯಾವನ ನಾಮಸ್ಮರಣೆಯ ವಿನಹ ಈ ಜನ್ಮದಲ್ಲಿ ನನಗೆ, ಬೇರೆ ಕರ್ತವ್ಯವೇ ಇಲ್ಲವೋ— ಅಂಥವನನ್ನು ಮರೆತು ನಾನು- ಬದುಕಿಯಾದರೂ ಇರಲು

ಸಾಧ್ಯವೆ? ಗಿರಿಜಾಬಾಯಿ ಅಂಥ ಮಾತನ್ನಾಡಬೇಡಿ. ಅವನ ದರ್ಶನಕ್ಕೆ ಹೊರಡುವಾಗ ನನಗೆ ಇಲ್ಲದ ತೊಂದರೆಗಳು ಅಡ್ಡ ಬಂದವೆಂದು, ತನ್ನ ದರ್ಶನ ಕೊಡುವದು ಅವನಿಗೇ ಬೇಕಿಲ್ಲ ವೆಂದು ತಿಳಿದು, ನಾನು ಸುಮ್ಮನಾದೆನು!

**ಗಿರಿಜಾಬಾಯಿ**—ಇದೋ ಇನ್ನು ಮುಂದೆ ದೃಢನಿಶ್ಚಯ ಮಾಡು. ನನ್ನ ಮೇಲೆ ವಿಶ್ವಾಸವಿಡು. ನನ್ನ ಬಗ್ಗೆ ಇಲ್ಲದ ವಿಚಾರ ಮಾಡಬೇಡ. ನಾನೇನು ಮುದುಕಿಯು! ನನ್ನನ್ನೇನು ಮಾಡಿಯಾರು; ಬಹಳ ವಾದರೆ ನಾಲ್ಕು ಬಯ್ಯಾರು; ಆ ಮೇಲೆ ತಾವೇ ಬಿಟ್ಟುಬಿಡುವರು. ನಾನು ನಿನಗೆ-ಆಗಲೇ ಹೇಳಲಿಲ್ಲವೆ? ಪ್ರತ್ಯಕ್ಷ ವಿಠ್ಠಲನೇ ನಿನ ಗಾಗಿ ಬಂದಿದ್ದಾನೆ ಎಂದು; ಹೀಗೆ ನೀನು ಅನುಸಂಧಾನ ಮಾಡಿಕೊ!

ರಾಗ ಪಹಡಿ, ತಾಳ ಧುಮಾಳಿ

**ಏತಕೆ ಯೋಚಿಪೆ ಭಾಗ್ಯಶೀಲೆ। ಬಿಡು ಸಂದೇಹ ಬಾಲಾ ಮಣಿಯೇ ನೋಡುವೆ ಪಂಢರಿಯನ್ನು ಬೇಗ ॥ ೧ ॥ ಶ್ರೀವಿಠ್ಠಲನೇ ತಾ ವೇಗದಲಿ ಧಾವಿಸಿ ಬಂದಿಹನೆಂದು ತಿಳಿಯೇ ॥ ೨ ॥**

**ಸಖೂದೇವಿ**—ಆಗಲಿ ತಾಯೀ-ನಾನು ಹೋಗುತ್ತೇನೆ. ನಾನು ಸರಿ ಯಾಗಿ ಏಕಾದಶಿಯ ದಿನ ಪಂಢರಪುರವನ್ನು ತಲುಪುವೆನಷ್ಟೆ!—

**ಗಿರಿಜಾಬಾಯಿ**—ಖಂಡಿತವಾಗಿ ತಲುಪುವೆ! ದೇವರ ಮನಸ್ಸಿಗೆ ಬಂದರೆ— ಅದಕ್ಕೂ ಮುಂಚಿತವಾಗಿ ತಲುಪುವಿ!— ಹೋಗು ನೀನಿನ್ನು—!

**ಸಖೂದೇವಿ**—ಆಹಹಾ-ಎಂಥ ಶುಭದಿನವಿದು.—

ರಾಗ ಪಿಲುಮಿಶ್ರಿತ, ತಾಳ ಕೇರವಾ

**ಗೋಕುಲ ಗೋಪೀಬಾಲಾ। ವಿಠ್ಠಲಾ। ವನಮಾಲಾ ಗುಣಶೀಲಾ ॥ ಪಲ್ಲ ॥ ಕಾಣುವೆ ನಿನ್ನ ಮನೋಹರ ಮೂರ್ತಿಯ। ಜ್ಞಾನನಿಧೇ ಸುಜನೋದ್ಧಾರಾ। ವರಹೀರಾ ಯೋಗಿವರಾ ಗಂಭೀರಾ ॥ ೧ ॥**　　(ಹೋಗುವರು)

---

# ೨ನೇ ಪ್ರವೇಶ

ಸ್ಥಳ—ಬೀದಿ

**ಗಿರಿಜಾಬಾಯಿ**—ಇದೋ ಗರುಡಾ (ಸ್ವಗತ) ಹೀಗೇ ಏನಾದರೂ ಮಧ್ಯ-ಮಧ್ಯ ಗುಟ್ಟು ರಟ್ಟಾಗುವಂಥ ಮಾತುಗಳು ಹೊರಬೀಳುತ್ತವೆ. (ಸಖೂದೇವಿಗೆ) ಇವನಿಗೆ ದಾರಿ ಚನ್ನಾಗಿ ಗೊತ್ತಿದೆ. ಏಕಾದಶಿಗಿಂತ ಮೊದಲೆ ನಿನ್ನನ್ನು-ಪಂಢರಪುರಕ್ಕೆ ತಲುಪಿಸುವನು. (ಗರುಡನಿಗೆ) ಸಖೂದೇವಿಯೆಂದರೆ–ನನ್ನ ಪ್ರಾಣಪದಕ–ತಿಳಿಯಿತೇ! ಇವಳನ್ನು ಜೋಪಾನವಾಗಿ ಕರೆದುಕೊಂಡು ಹೋಗು; ನಾನು ಏನಾದರೂ ಹಂಚಿಕೆ ಮಾಡಿ ಇಲ್ಲಿಂದ ಬರುವೆನು. (ಸಖೂದೇವಿಗೆ) ಸಖೂದೇವೀ-ಪಂಢರಪುರದಲ್ಲಿ–"ನಮ್ಮ ಮನೆಯವರು ನಿನ್ನನ್ನು–ಹೇಗೆ ಬಂದೆ ಎಂದು ಕೇಳಿದರೆ" ವಿಠ್ಠಲನ ಕೃಪೆ ಇಂದ. ಎಂದು ಹೇಳು; ತಿಳಿಯಿತೆ-ಯಾಕಂದರೆ ನಾನು ಅವರಿಗೆ ತಿಳಿಸದೇ ಈಗ ನಿನ್ನನ್ನು ಕರೆಯಬಂದಿರುವೆನು.

**ಸಖೂದೇವಿ**—ಹಾಗಾದರೆ ನಾನು ಏಕಾದಶಿಗೆ ಪಂಢರಪುರಕ್ಕೆ ತಲುಪುತ್ತೇನಲ್ಲವೆ?-ಆಹಹಾ-ತಾಯೀ—

**ಗಿರಿಜಾಬಾಯಿ**—ಕಂದಮ್ಮಾ ಸುಖವಾಗಿ ಹೋಗು. ನಾನೂ ನಿನ್ನ ಹಿಂದೆಯೇ ಬರುತ್ತೇನೆ; ಆದರೆ ಆಗಲೇ ನಾನು ಹೇಳಿದ್ದು ಮರೆಯಬೇಡ. ನಾನೇ ನಿನಗೆ ಭೆಟ್ಟಿಯಾದರೂ ಯಾವ ಮಾತನ್ನೂ ತೆಗೆಯಬೇಡ. (ಗರುಡನಿಗೆ) ಗರುಡಾ ಯಾವುದಾದರೂ ಸಮೀಪದ ಮಾರ್ಗದಿಂದ ಇವಳನ್ನು ಬೇಗನೇ ಪಂಢರಪುರಕ್ಕೆ ಕರೆದುಕೊಂಡು ಹೋಗು.

**ಗರುಡ**—ಸ್ವಾಮಿಯವರ ಆಜ್ಞೆಯು ಶಿರಸಾಮಾನ್ಯವು; ದಾರಿಯಲ್ಲಿ ಯಾರಾದರೂ ನಮಗೆ ತೊಂದರೆ ಕೊಡಲು ಬಂದರೆ, ಈ ನನ್ನ ರೆಕ್ಕೆಗಳಿಂದ ಅವರನ್ನು—(ಸ್ವಗತ ನಾಲಿಗೆ ಕಚ್ಚಿ) ಹೀಗೆ ಏನಾದರೂ ತಪ್ಪಾಗುವದು. ಈ ನನ್ನ ಕೈಯಲ್ಲಿರುವ ಕೋಲಿನಿಂದ—

**ಗಿರಿಜಾಬಾಯಿ**—ಸಾಕು. ಸಾಕು. ಮೊದಲು ಇವಳನ್ನು ಸುಖವಾಗಿ

ತಲುಪಿಸು. ಆಮೇಲೆ ಬೇಕಾದಷ್ಟು ಪೌರುಷ ತೋಡಿಕೊಳ್ಳುವಿಯಂತೆ!

**ಸಖೂದೇವಿ**—(ಸ್ವಗತ) ಈ ಗಿರಿಜಾಬಾಯಿಯ ವಾಣಿಯಲ್ಲಿ ಮತ್ತು ಹಸ್ತಗಳಲ್ಲಿ ಅಂಥ ಯಾವ ಗುಣ ತುಂಬಿದೆಯೋ ಆ ವಿಠ್ಠಲನೇ ಬಲ್ಲ. ಅವರು ನನ್ನ ತಲೆಯ ಮೇಲೆ ಕೈಯಿಟ್ಟಾಗ ಅಂಗಾಂಗಗಳಲ್ಲಿ ಸೆಳೆ ಮಿಂಚು ಚಿಮ್ಮಿದಂತಾಯಿತು; ಈವರೆಗಿನ ನನ್ನ ಕಷ್ಟಗಳು ಪರಿಹಾರವಾದಂತಾಯಿತು. ನಾಳೆ ಬೆಳಗ್ಗೆ ಪಂಢರಪುರಕ್ಕೆ ಹೋದ ಮೇಲೆ—ಪಾಂಡುರಂಗನು—

**ಗರುಡ**—ಅಮ್ಮಾ ಬೇಗನೇ ಹೊರಡಿರಿ. ಗಿರಿಜಾಬಾಯಿಯವರು ಮತ್ತೆ ಎಂದಾದರೂ ಭೆಟ್ಟಿಯಾದಾರು— (ಪ್ರೇಮಪೂರಿತ ನೋಟದಿಂದ ಗಿರಿಜಾಬಾಯಿಯವರನ್ನು ನೋಡುತ್ತ ಗರುಡನೊಂದಿಗೆ ಹೋಗುವಳು)

**ಗಿರಿಜಾಬಾಯಿ**—ಇಲ್ಲಿಯ ತನಕ ಎಲ್ಲವೂ ಸರಿಯಾಗಿ ಹೊಂದಿತು. ಇನ್ನುಮೇಲೆ ಈ ವೃದ್ಧ ಗಿರಿಜಾಬಾಯಿಯ ರೂಪವನ್ನು ಬಿಟ್ಟು-ಹದಿನೆಂಟು ವರುಷದ ಸಖೂದೇವಿಯ ರೂಪವನ್ನು ಧರಿಸಬೇಕು; ಯಾಕಂದರೆ ಕತ್ತಲು ಕೋಣೆಯಲ್ಲಿ ಸಖೂದೇವಿಯು ಇಲ್ಲದುದನ್ನು ನೋಡಿದ ಕೂಡಲೇ ಚಂಡಿಕಾಬಾಯಿಯು ಆಕಾಶ ಪಾತಾಳಗಳನ್ನು ಒಂದೇಮಾಡಿಬಿಡುವಳು. ಅಂದಮೇಲೆ, ಆ ಬಗ್ಗೆ ಏನಾದರೂ ವ್ಯವಸ್ಥೆ ಮಾಡಲೇಬೇಕಲ್ಲವೆ? ಈಗ ನಾವು ಸಖೂದೇವಿಯ ರೂಪ ಧರಿಸಿಕೊಂಡು, ಚಂಡಿಕಾಬಾಯಿಯ ಸೊಸೆಯಾಗಿ-ಅವಳು ಹೇಳಿದ ಕೆಲಸವನ್ನು ಮಾಡಬೇಕು. ಕೃಷ್ಣಾವತಾರದಲ್ಲಿ-ನಮ್ಮ ತಾಯಿಯು ಆಗಾಗ ನಮ್ಮನ್ನು ಕಟ್ಟಿಹಾಕುತ್ತಿದ್ದಳಾದ್ದರಿಂದ, ಕಟ್ಟಿಸಿಹಾಕಿಕೊಳ್ಳುವ ಅಭ್ಯಾಸ ನಮಗೆ ಚನ್ನಾಗಿ ಇರುತ್ತದೆ; ಏಕನಾಥನ ಮನೆಯಲ್ಲಿ ನೀರು ಹೊರುತ್ತಿದ್ದೆ; ಅದರಿಂದ ಅದಕ್ಕೂ ನಾವು ಹಿಂದುಮುಂದು ನೋಡಬೇಕಾದ್ದಿಲ್ಲ; ಜನಾಬಾಯಿಯ ಮನೆಯಲ್ಲಿ ಕುಟ್ಟು-ಬೀಸುವ ಉದ್ಯೋಗವನ್ನು ಮಾಡಿದುದರಿಂದ, ಆ ಕೆಲಸ ಚನ್ನಾಗಿ ಮನದಟ್ಟಾಗಿದೆ; ಭೃಗುಮುನಿಯು ಎದೆಗೆ ಒದ್ದು, ಒದೆತ ತಿನ್ನುವ ಪಾಠವನ್ನು ನಮಗೆ

ಚನ್ನಾಗಿ ಕಲಿಸಿದ್ದಾನೆ; ಸರಿ ಇನ್ನೇಕೆ ಅನುಮಾನ. ಇನ್ನು ಹದಿನೈದು ದಿನ ಸಖೂದೇವಿಯು ಬರುವಂತಿಲ್ಲ-ಅಲ್ಲಿಯತನಕ ಅವಳ ರೂಪವನ್ನು ಧರಿಸಿ ಕಾಲಕಳೆಯಬೇಕು—

ರಾಗ ಹಂಸಧ್ವನಿ, ತಾಳ ದಾದರಾ

**ಸಕಲ ಜಗದ ಧರ್ಮಾತ್ಮರ ನಿರುತ ಪಾಲಿಪೆ ॥ ಭಕ್ತ ಜನಾಳಿಯ ತಾಪವಾಗಾಗಲೆ ಪರಿಹರಿಪೆ ॥ಪಲ್ಲ॥ ಅಡಿಗಡಿಗೆ ಖಲಜನಕೆ । ಕಡುತಾಪವ ನೆಸಗುವೆ ನಾ ಬಿಡದೆ ಕ್ರೂರಶಾಶನವ । ಮಾಡುವೆನತಿ ಕೋಪದಲಿ ॥ ೧ ॥**

ಹೋಗುವಳು. ತೆರೆಬೀಳುವದು

---

## ೩ನೇ ಪ್ರವೇಶ

ಸ್ಥಳ:— ರಸ್ತೆ. ಮಾಧವರಾವ ಶ್ರೀಪತರಾವ, ಮಹಿಪತರಾವ, ಬರುವರು.

**ಮಾಧವ**— ಮಹಿಪತರಾವ, ಶ್ರೀಪತರಾವ— ನನಗೆ ನಿಮ್ಮನ್ನು ಕುರಿತು ಒಂದು ಮಾತು ಕೇಳಬೇಕಾಗಿದೆ; ಕೇಳಲೆ ?

**ಶ್ರೀಪತರಾವ**— ಓಹೋ ಕೇಳು. ಅದಕ್ಕೇಕೆ ಅನುಮಾನಪಡುವಿ!

**ಮಾಧವ**— ಅಷ್ಟು ವಿಶೇಷವೇನೂ ಅಲ್ಲ; ಆಗಲೇ ನಾವು ಆ ಮಾವಿನ ತೋಪಿನಲ್ಲಿ ಆಡುತ್ತಿರುವಾಗ ನೀವಿಬ್ಬರೂ ನನ್ನಕಡೆಗೆ ನೋಡಿ-ಏನೋ ಕಣ್ಣುಸನ್ನೆ ಮಾಡಿದಿರಿ; ಎರಡು ಮೂರು ಸಲ ನನ್ನನ್ನು ಏನೋ ಒಂದು ವಿಧವಾದ ನೋಟದಿಂದ ನೋಡಿ—ನಕ್ಕೀರಿ; ಅದು ನನ್ನನ್ನು ಬರಿಯ ಚೇಷ್ಟೆ ಮಾಡಬೇಕೆಂದೋ, ಇಲ್ಲ-ಮತ್ತೇನಾದರೂ ಅಭಿಪ್ರಾಯವೋ—?—

**ಮಹಿಪತರಾವ**— ಛೆ— ಛೆ—ಚೇಷ್ಟೆ ಇಲ್ಲ; ಮತ್ತೇನೂ ಇಲ್ಲ; ಈಗ ಎಷ್ಟೋ ದಿನಗಳಿಂದ ನಿನ್ನ ಕೂಡ ನಮಗೆ ಒಂದು ವಿಷಯದಲ್ಲಿ-ಮಾತಾಡಬೇಕಾಗಿದೆ, ಆದನ್ನೇ ನಾವಿಬ್ಬರೂ ನಮ್ಮನಮ್ಮೊಳಗೆ ಸೂಚಿಸಿಕೊಂಡೆವು.

**ಮಾಧವ**— ನಿಮ್ಮೀರ್ವರಿಗೂ ನನ್ನ ಸ್ವಭಾವ ಗೊತ್ತಿದೆ; ನಾನು ಎಂಥ ಭಯಸ್ತನೆಂಬುದೂ ನೀವು ಬಲ್ಲಿರಿ; ಅಂದಮೇಲೆ ನನ್ನ ಕೂಡ

ಮಾತಾಡಲು ನೀವೇಕೆ ಸಂಕೋಚಪಡುತ್ತೀರಿ; ಬೇಕಾದ್ದನ್ನು ಕೇಳಬಹುದು—

**ಶ್ರೀಪತರಾವ**—ಒಳ್ಳೇದು ಹಾಗಾದರೆ—ನಿನಗೆ ಒಪ್ಪಿತವಾಗಲಿ,— ಆಗದಿರಲಿ ನಾವು ಹೇಳಿಯೇ ಬಿಡುತ್ತೇವೆ; ಆದರೆ ನೀನುಮಾತ್ರ ನಮ್ಮಮೇಲೆ ಕೋಪಮಾಡಬೇಡ. ನಿನ್ನ ಪತ್ನಿಯು ಕೇವಲ ಸಾಧ್ವಿಯು. ಇಂದಿನ ವರೆಗೆ ನೀವು ಅವಳನ್ನು- ವಿನಾಕಾರಣ ಪೀಡಿಸಿದ್ದೀರಿ; ಈ ಮಾತನ್ನು ನಾವು ಕೇಳಹತ್ತಿ ಎಷ್ಟೋ ದಿನಗಳಾದವು; ಆದರೂ ಸ್ನೇಹದಲ್ಲಿ ವ್ಯತ್ಯಾಸವಾದೀತೆಂದು ಈವರೆಗೂ ನಾವು ಆ ಮಾತನ್ನು ತೆಗೆದಿರಲಿಲ್ಲ; ಆದರೆ ನನ್ನ ಹೆಂಡತಿಯು ನಿನ್ನಮುಂದೆ ಈ ಮಾತನ್ನು ತೆಗೆಯಲು ದಿನಾಲು ಒತ್ತಾಯಪಡಿಸುತ್ತಿದ್ದಾಳೆ.

**ಮಹಿಪತರಾವ**—ನನ್ನ ಹೆಂಡತಿಯೂ ಅದೇ ರೀತಿಯಾಗಿಯೇ ಆಗ್ರಹಮಾಡುತ್ತಿರುವಳು; ಅವಳು ನಿನ್ನ ಹೆಂಡತಿಯನ್ನು ಪ್ರತ್ಯಕ್ಷದೇವಿಯ ಅವತಾರವೆಂದೇ ಭಾವಿಸುವಳು. ನಿನ್ನಿನದಿನ ನೀವೇನೋ ಅವಳನ್ನು ಕಟ್ಟಿಹಾಕಿದ್ದಿರಂತೆ, ಅಂಥ ಘೋರ ಅಪರಾಧವು ಅವಳಿಂದ ಯಾವುದು ಜರುಗಿತು.

**ಮಾಧವ**—ಅವಳ ಅಪರಾಧವು ಊರ ಜನಕ್ಕೇ ಗೊತ್ತಾಗಿದೆ; ಅಂದಮೇಲೆ ನಿಮಗೆ ಮಾತ್ರ ಗೊತ್ತಾಗದಿದ್ದುದು, ಆಶ್ಚರ್ಯವೇ ಸರಿ.

**ಶ್ರೀಪತಿ**—ಎಲ್ಲ ಗೊತ್ತಿದೆ ಬಿಡು. ಅವಳ ತಂದೆಯು ಸ್ನೇಹಿತರು-ಅವಳಿಗೆ ಭೆಟ್ಟಿಯಾದರು; ಅವರ ಕೂಡ ಸಖೂದೇವಿಯು ಪಂಢರಪುರಕ್ಕೆ ಹೋಗಲು ಸಮ್ಮತಿಸಿದಳು; ಇದೇ ಅಲ್ಲವೇ ಅವಳ ಅಪರಾಧ.

**ಮಾಧವ**—ಅಂದರೆ ಇದು ಅಪರಾಧವಲ್ಲವೆಂದು ನಿಮ್ಮ ಅಭಿಪ್ರಾಯವೋ?

**ಮಹಿಪತಿ**—ಮಾಧವರಾಯಾ ನೀನು- ಚನ್ನಾಗಿ ವಿಚಾರಮಾಡಿ ನೋಡು! ನಿನ್ನೆರಾತ್ರಿ ಅವಳು ನಿನ್ನ ಶಯನಮಂದಿರವನ್ನು ಪ್ರವೇಶಿಸಿದಳು; ಅದು ನಿಮಗೆ ಮಹಾಘೋರ ಅಪರಾಧವಾಗಿ ಕಂಡಿತು; ಅವಳನ್ನು ಸಿಕ್ಕಾಬಟ್ಟೆ ಹೊಡೆದು, ಹೊರಗೆ ತಳ್ಳಿದಿರಿ; ತಲಬಾಗಿಲು ಹಾಕಿಕೊಂಡಿರಿ; ಆಗ ಅವಳೇನು ಮಾಡಬೇಕು; ದಾರಿಕಾಣದೇ-

ಪಂಢರಪುರಕ್ಕೆ ಹೋಗಲು ಸಿದ್ಧಳಾದರೆ, ಅದು ಅವಳ ತಪ್ಪೆ?—ಮೊದಲಿನಿಂದ ಅವಳದು ಅನನ್ಯಭಕ್ತಿ ವಿಠ್ಠಲನ ಮೇಲೆ. ಇಂಥಹ ಪ್ರಸಂಗದಲ್ಲಿ ಅವಳು, ಅವನನ್ನೇ ಮೊರೆಹೋದರೆ, ಏನಾಶ್ಚರ್ಯ? ಹಾಗೆ ಮಾಡದೇ ಇದ್ದ ಊರಲ್ಲಿಯೇ ಮನೆ-ಮನೆ ಭಿಕ್ಷೆ ಬೇಡಿ, ಅವಳು ಜೀವಿಸಬೇಕಿತ್ತೇ? ಮಾಧವರಾಯಾ ನೀನು ಸುವಿಚಾರಿಯೆಂದು ನಿನ್ನ ಮುಂದೆ ನಾನು ಸ್ಪಷ್ಟವಾಗಿ ಮಾತಾಡುತ್ತೇನೆ; ಆಬಗ್ಗೆ ನೀನು ನನ್ನನ್ನು ಕ್ಷಮಿಸು.

**ಮಾಧವ**—ಮಹಿಪತಿರಾಯರೇ ನೀವು ಹೇಳಿದ ಮಾತುಗಳು ನನಗೆ ತಿಳಿದವು; ಆದರೆ ನಾನು-ಏನುಮಾಡಲಿ; ಯಾಕಂದರೆ. ನನ್ನ ತಾಯಿಯಮುಂದೆ ನನ್ನ ಆಟವೇ ಸಾಗುವದಿಲ್ಲ. ಅವಳು ಮಾಡುವದೆಲ್ಲ ತೀರ ಅನ್ಯಾಯವೆಂದು ನನಗೆನಿಸುತ್ತಿದೆ, ಆದರೆ ಕೋಪದಿಂದ ಒಂದು ಸಲ ಕಣ್ದೆರೆದು ನೋಡಿದರೆ- ಸಾಕು- ನನ್ನ ಧೈರ್ಯವೇ ಕುಗ್ಗಿಹೋಗುವದು; ಮತ್ತು ನಿಮಗೆ ಗೊತ್ತಿದ್ದೀತು- ಅವಳ ಈ ಸ್ವಭಾವಕ್ಕೆ ಅಂಜಿಯೇ ನಮ್ಮ ತಂದೆಯವರು- ಮನೆ ಬಿಟ್ಟು, ತೋಟದಲ್ಲಿ ವಾಸವಾಗಿರುವರು.

**ಶ್ರೀಪತಿ**—ಹಾಗಾದರೆ—ಮುಂದೆ ಇದಕ್ಕೆ, ಯಾವ ಉಪಾಯವೂ ಇಲ್ಲವೆ? ನಿನ್ನ ಹೆಂಡತಿಯು ಅನ್ನನೀರಿಲ್ಲದೇ ನೆಲಮನೆಯಲ್ಲಿಯೇ ಕೊಳೆಬಿದ್ದು ಸಾಯಬೇಕೆ?

**ಮಾಧವ**—ಏನು ಮಾಡಲಿ; ಅದೇ ನನಗೆ ತಿಳಯದಾಗಿದೆ! ಅವಳನ್ನು ಬಂಧನದಿಂದ ಬಿಡಿಸಿ, ನಾಲ್ಕು ತಿಳುವಳಿಕೆಯ ಮಾತುಗಳನ್ನು ಹೇಳಬೇಕೆಂದು ನನ್ನ ಮನಸ್ಸು ತವಕಪಡುತ್ತಿದೆ—ಆದರೆ—

**ಮಹಿಪತಿ**—ಇದೋ ನೋಡು, ಹೀಗೆ ನೀನು—ವಿಚಾರದಲ್ಲಿಯೇ ಕಾಲ ಕಳೆದರೆ, ಯಾವುದೂ ಬಗೆಹರಿಯುವುದಿಲ್ಲ! ನೀನು ಈಗಿಂದೀಗಲೇ ಹೋಗಿ, ಅವಳನ್ನು ಬಂಧನದಿಂದ ಬಿಡಿಸು! ನಿನ್ನ ಒಂದೇ ಒಂದು ಪ್ರೇಮಪೂರಿತ ಶಬ್ದದಿಂದ ಅವಳು, ತನ್ನ ವೃತ್ತಿಯನ್ನೇ ಬದಲು ಮಾಡಿಕೊಳ್ಳುವಳು; ತನಗೆ ಸುದಿನಗಳು ಬಂದವೆಂದು ಭಾವಿಸಿ, ಸಂತೋಷದಲ್ಲಿ ತೇಲಾಡುವಳು. ಬೇಕಾದರೆ, ಈ

ಮಾತನ್ನು ನೀನು-ಒರೆಹಚ್ಚಿ ನೋಡು. ನಿನಗೆ ಹೆಂಡತಿಯ ಮೇಲೆ ಪ್ರೀತಿ ಇದೆ; ಆದರೆ ಅದನ್ನು ವ್ಯಕ್ತಪಡಿಸುವ ಧೈರ್ಯವಿಲ್ಲ; ಇದೋ ಇದನ್ನು ನೀನು ಪೂರಾ ಲಕ್ಷದಲ್ಲಿಡು! ಯಾವನೇ ಆಗಲಿ-ತನ್ನ ಹೆಂಡತಿಯನ್ನು ಪ್ರೀತಿಯಿಂದ ಮಾತಾಡಿಸುವದು; ಅವಳ ಬಗ್ಗೆ ಅಂತಃಕರಣಪಡುವದು; ಇವು ಎಂದೂ ತಪ್ಪಾಗಲಾರವು! ಇನ್ನುಮುಂದೆ ನೀನು ನಿನ್ನ ತಾಯ ಶಬ್ದಗಳಿಗೆ ದುರ್ಲಕ್ಷಮಾಡಿ, ನಿನ್ನ ಹೆಂಡತಿಯ ಬಗ್ಗೆ ಆದರ ತೋರಿಸುತ್ತ ಹೋಗು; ಹಾಗೇ ಕೆಲದಿನ ಕಳೆಯಲಿ; ಆಮೇಲೆ ನೋಡು-ನಿನ್ನ ತಾಯಿಯು ಗತಿಗಾಣದೇ ತಾನೇ ದಾರಿಗೆ ಬರುವಳು!

**ಶ್ರೀಪತಿ**—ಮಹಿಪತಿರಾಯನ ಅಭಿಪ್ರಾಯವು ತೀರಾ ಸತ್ಯವು. ನಿಮ್ಮ ತಾಯಿ ಮಕ್ಕಳ ಛಲನೆಯಿಂದ, ಸಖೂದೇವಿಯ ವೈರಾಗ್ಯವು ದಿನ ದಿನಕ್ಕೂ ಹೆಚ್ಚುತ್ತ ನಡೆದಿರುವದು.

**ಮಾಧವ**—ಹೌದು. ಹೌದು. ಇದು ಮಾತ್ರ ತೀರಾ ಸತ್ಯವು.

**ಶ್ರೀಪತಿ**—ಇಷ್ಟು ನಿನಗೆ ಮನದಟ್ಟಾದಮೇಲೂ ನೀನು-ಧೈರ್ಯ ಮಾಡಲಾರೆಯಾ?— ನಿನ್ನ ತಾಯಿಯು ಮನೆಯಲ್ಲಿರುವಾಗ, ಸಖೂದೇವಿಯನ್ನು ಹೇಗೆ ಬಂಧಮುಕ್ತ ಮಾಡಲಿ—ಎನ್ನುವ ಚಿಂತೆ ನಿನಗಿದ್ದರೆ, ನಿಮ್ಮ ತಾಯನ್ನು ನಮ್ಮ ಮನೆಗೆ ಬರುವಂತೆ ನಾನು ಹಂಚಿಕೆ ಮಾಡುತ್ತೇನೆ; ಅಂದಮೇಲಾದರೂ ನಿನಗೆ ಭಯವೆಲ್ಲಿ ಬಂತು?—

**ಮಾಧವ**—ಅಷ್ಟುಮಾಡಿದರೆ— ನಾನು ನನ್ನ ಹೆಂಡತಿಯನ್ನು ಬಂಧಮುಕ್ತ ಮಾಡಿಯೇ ತೀರುತ್ತೇನೆ. ಆನಂತರ ಅವಳು ಬಂದು ಎಷ್ಟು ಕೂಗಾಡಿದರೂ, ಅದನ್ನು ಕೇಳುವದಿಲ್ಲ—

ರಾಗ ಸುಮಾಸುಗ್ರಾಯಿ, ತಾಳ ಎಕ್ಕಾ

**ಛೇದಿಸಿ ಬಂಧನವ ಸತಿಯ ತಾಪ ನಾಶ ಮಾಳ್ಪೆ ॥ ಜನನಿಭಯವ ನೋಡದೆ ನಾನು ತ್ವರಿತ ಪೋಗುವೆ । ಮಾನಿನಿಯ ಕಾಣುವೆ ನಾ । ನಿಜದೆ ಸಾರಿ ಪೇಳ್ವೆ ॥ ೧ ॥**

**ಮಹಿಪತಿ**—ಸರಿ ಹಾಗಾದರೆ ನಾಸೀಗಲೇ ಹೋಗಿ, ನನ್ನ ತಾಯಿಗೆ

ಹೇಳಿ, ನಿನ್ನ ತಾಯನ್ನು ನಮ್ಮ ಮನೆಗೆ ಬರುವಂತೆ ಮಾಡುತ್ತೇನೆ. ಆಮೇಲೆ ನೋಡುತ್ತೇನೆ ನೀನೇನು ಮಾಡುತ್ತೀಯೋ ಅದನ್ನು— ಅದೋ ನೋಡು ಸಾಯಂಕಾಲವಾಯಿತು. ಇದೇ ತಕ್ಕ ಸಮಯ-
( ಎಲ್ಲರೂ ಹೋಗುವರು )

---

## ೪ನೇ ಪ್ರವೇಶ

ಸ್ಥಳ:— ಕತ್ತಲು ಕೋಣೆ. ಸಖೂದೇವಿಯು ಬಂಧನದಲ್ಲಿದ್ದಾಳೆ

**ಸಖೂದೇವಿ**—(ಸ್ವಗತ) ಈ ನಮ್ಮ ಹೊಸ ನಾಟಕದ ಪ್ರಯೋಗವನ್ನು ನಮ್ಮ ಪಟ್ಟದರಸಿಯರಾದ- ರುಕ್ಮಿಣಿ- ಸತ್ಯಭಾಮೆಯರು ನೋಡಿದ್ದರೆ, ಅದೆಷ್ಟು ಅಪಹಾಸ್ಯ ಮಾಡುತ್ತಿದ್ದರೊ, ಯಾರಿಗೆ ಗೊತ್ತು! ಇಲ್ಲಿಯ ವರೆಗೆ ಸರಿಯಾಗಿ ಕಳೆಕಟ್ಟಿತು ಈ ನಾಟಕ. ಇನ್ನು ಮುಂದೆ- ಇಂದು ಬೆಳಿಗ್ಗೆ ಪದ್ಮಾವತಿ ಅತ್ತಿಗೆಯವರು ಉಪದೇಶ ಮಾಡಿದಂತೆ, ನಾವೇಕೆ ಮಾಡಬಾರದು! ಇನ್ನೇಕೆ ಈ ಭಜನೆ; ಇನ್ನೇಕೆ ಈ ಮೂರ್ತಿಪೂಜೆ; ಇಂಥ ವ್ಯಸನಗಳು ಇನ್ನು ಮುಂದೆ ಎಷ್ಟೂ ಸರಿಯಲ್ಲ ನನಗೆ! ಭಕ್ತರು ದೇವರ ನಾಮಸ್ಮರಣೆ ಮಾಡುತ್ತಾರೆ; ಮೂರ್ತಿಯ ಪೂಜೆ ಮಾಡುತ್ತಾರೆ; ಆದರೆ ನಾವೇ ನಮ್ಮ ಪೂಜೆಮಾಡಿಕೊಳ್ಳಹತ್ತಿದರೆ, ಅದಕ್ಕೂ ಮೀರಿದ ಅಪರಾಧ ಇನ್ನಾವುದು! ಇನ್ನು ಮುಂದೆ ಈ ವೇಷಧಾರೀ ಸಖೂದೇವಿಯು ವಿಠ್ಠಲನ ಭಜನೆಯನ್ನು ಒಂದು ಬದಿಗೆ ಕಟ್ಟಿಡುವಳು; ಅಂದರೆ ಅವರು ನಮ್ಮನ್ನು ಬಂಧನದಿಂದ ಬಿಡಿಸುವರು. ಅವರ ಸಮಕ್ಷಮ ಈ ಮೂರ್ತಿಯನ್ನು ಮತ್ತು ಈ ತುಲಸೀ ಮಾಲೆಯನ್ನು ಬಿಸಾಕಿಬಿಡುವೆನು; ಅಂದರೆ ಸಖೂದೇವಿಗೆ ಈಗ ಚನ್ನಾಗಿ ಬುದ್ಧಿ ಬಂದಿದೆಯೆಂದು ತಿಳಿದು, ನನ್ನ ಮೇಲೆ ಹೆಚ್ಚು ಪ್ರೀತಿ ಮಾಡಬಹುದು. (ಆಚೆಗೆ ನೋಡಿ) ಯಾರೋ ಬರುತ್ತಿರುವಂತೆ ಕಾಣುತ್ತದೆ: ನಮ್ಮ ಅತ್ತೆಯವರೇ ಇದ್ದೀತು; ಛೆ- ಅಲ್ಲ; ನಮ್ಮ ಪತಿರಾಜರು!

ಇವರು ಬಂದು ಏನುಮಾಡತಕ್ಕವರು! ಒದೆತಗಳನ್ನು ಹಾಕತಕ್ಕವರೋ ಏನು! ಛೀ-ಛೀ- ಅಂತಹ ಪ್ರಸಂಗವೇನೂ ಕಾಣುವದಿಲ್ಲ.

**ಮಾಧವ**—(ಪ್ರವೇಶಿಸಿ) (ಸ್ವಗತ) ಮಹಿಪತಿರಾಯನು ಸೂಚಿಸಿದ ಹಂಚಿಕೆಯು ಸರ್ವೋತ್ಕೃಷ್ಟವಾದುದು. ನಮ್ಮ ಮಾತೋಶ್ರೀಯವರನ್ನು ತನ್ನ ಮನೆಗೆ, ಕರೆದೊಯ್ದು ನನಗೆ ನನ್ನ ಮಾರ್ಗವನ್ನು ಸುಗಮ ಮಾಡಿದನು. ಇನ್ನು ಒಂದು ಗಳಿಗೆ ತನಕ ಆವಳು ಬರುವಂತಿಲ್ಲ; ಅಷ್ಟರಲ್ಲಿ ನಾವು- ನಮ್ಮ ಕೆಲಸವನ್ನು ಪೂರೈಸಬೇಕು. (ಸಖೂದೇವಿಯನ್ನು ನೋಡಿ ಆಶ್ಚರ್ಯದಿಂದ) ಇದೇನು ಇವಳು ನನ್ನ ಹೆಂಡತಿಯೋ ಅಥವಾ ನನಗೇ ಭ್ರಾಂತಿಯೋ; ಇಷ್ಟು ದಿನಗಳ ಒರೆಗೆ ನಾನು ನೋಡುತ್ತ ಬಂದುದು ಇವಳನ್ನೋ ಅಥವಾ—ಮತ್ತಾವಳನ್ನೋ—

ರಾಗ ಮಿಶ್ರತೆಲಂಗ, ತಾಳ ತ್ರಿವಟ

**ಭುವನದಾ ಭಾಗ್ಯನಿಧಿ ವನಿತಾಮಣಿ । ಅವನಿಯೊಳುದಯಿಸಿ ಪೊಳೆಯುವಳಮಯಾ। ವಿವಿಧ ತೆರದಿ ಸನ್ಮೋದವ ನೆಸಗುವ ॥ ಪಲ್ಲ ॥ ವನಜ ಮುಖದ ಕಳೆ । ಗೆಣೆಯುದು ಕಾಣೆ । ಮನವಿದು ಮುದಮಹಾನಂದ ಪೊಂದಿಹುದಮಮಾ। ಇನಿತು ಚೋದ್ಯತಮವೆಂತೀ ಸತಿಯೋಳ್ ಎನಗೆ ತಿಳಿಯದ್ದೆ ವಿಸ್ಮಿತನಾದೆನು ॥ ೧ ॥**

(ಬಾಗಿಲ ಸಮೀಪಕ್ಕೆ ಹೋಗಿ) ಎಲಾ ನನ್ನ ಹತ್ತಿರ ಬೀಗದ ಕೈಯೇ ಇಲ್ಲವಲ್ಲಾ—! ಅದು ನನ್ನ ತಾಯಿ ಹತ್ತಿರ ಇರುವದು. ಇರಲಿ ಅದಕ್ಕೇಕಿಷ್ಟು ಚಿಂತೆ. ಒಂದು ದೊಡ್ಡ ಕಲ್ಲು ತಂದು ಇದಕ್ಕೆ ಹೇರಿದರೆ- ತೀರಿತು! (ಹೊರಗೆ ಸದ್ದಾದಂತೆ ಭಾಸವಾಗುವದು) ಏನದು ಸದ್ದು- ನಮ್ಮ ತಾಯಿಯೇ ಬಂದಳೋ ಏನು ಮತ್ತೆ-! ಮನೆಯಲ್ಲಿ ನಾನೊಬ್ಬನೇ ಇದ್ದುದರಿಂದ, ಆವಳಿಗೆ ಸಂಶಯ ಬಂದಿರಬೇಕು; ಬಂದಳೋ ಏನು ಮತ್ತೆ! (ಯಾರೂ ಇಲ್ಲವೆಂದು ತಿಳಿದು) ಛೀ-ಯಾರೂ ಇಲ್ಲ. ಇನ್ನು ಮೇಲೇಕೆ ತಡ. "ಬೀಗಾಯ ಕಲ್ಲಾಯ ಸ್ವಾಹಾ!" (ಕೀಲಿಯು ಮುರಿಯುವದು. ಬಾಗಿಲು ತೆರೆದು ಆಚೆನೋಡುವನು. ಯಾವುದೋ ದಿವ್ಯಬೆಳಕು ಮಿಂಚಿದಂತೆ ಭಾಸವಾಗುವದು) ಇಂದಿನ ಒರೆಗೆ ನಾನು ಅಂಧನೇ ಆಗಿದ್ದೆನೊ; ಅಥವಾ-ತೀಕ್ಷ್ಣವಾದ ಮಧ್ಯದ ಅಮಲಿ

ನಲ್ಲಿಯೇ ಇದ್ದೆನೊ; ಇಂದು ಬೆಳಿಗ್ಗೆ ಯಾವಳ ಮುಡಿಯನ್ನು ಹಿಡಿದು, ಬೀದಿಯಲ್ಲಿ—ದರದರ- ಎಳೆಯುತ್ತ ಮನೆಗೆ ತಂದೆನೊ ಆವಳೇ ಇವಳೋ; ಅಯ್ಯೋ ಎಂಥ ಹತಭಾಗಿ ನಾನು. ನನ್ನ ಹೆಂಡತಿಯ ನಿಜವಾದ ಯೋಗ್ಯತೆಯು ನನಗೆ ಈಗ ತಿಳಿಯಬೇಕೆ? ನನಗಿಂತ ಮೊದಲು ನನ್ನ ಸ್ನೇಹಿತರಿಗೆ ಇವಳ ಯೋಗ್ಯತೆ ತಿಳಿಯಬೇಕು; ಆದರೆ ನನಗೆ ಕೊನೆಗೆ ತಿಳಿಯಬೇಕು; ಇದು ಎಂಥ ವಿಚಿತ್ರ! ಎಂಥ ಕಠಿಣ ಹೃದಯಿ ನಾನು! ಪ್ರಿಯೆ--ನಾನು ಇಂದಿನ ವರೆಗೆ ಮಾಡಿದ ಅಪರಾಧಗಳನ್ನು ಕ್ಷಮಿಸು. ಮೊದಲು— ಈ ದುಷ್ಟ ಕೈಗಳಿಂದ ನಿನ್ನ ಬಂಧನವನ್ನು ಬಿಡಿಸುತ್ತೇನೆ. (ಬಿಡಿಸುತ್ತಾನೆ) ಈಗೆರಡು ದಿನಗಳಿಂದ ನಿನ್ನ ಹೊಟ್ಟೆಯಲ್ಲಿ ಅನ್ನವೇ ಬಿದ್ದಿಲ್ಲ; ನಡೆಯಲು ಹೇಗೆ ಬಂದೀತು; ಕಾರಣ ನಿನ್ನನ್ನು ಮೆಲ್ಲನೆ ಎತ್ತಿಕೊಂಡು ನನ್ನ ಶಯ್ಯಾಗಾರಕ್ಕೆ ಹೋಗಿ ನಿನ್ನನ್ನು ಮಲಗಿಸುತ್ತೇನೆ. ಮೊದಲು ನಿನಗೆ ಸ್ವಲ್ಪ ಹಾಲು ಕೊಡುತ್ತೇನೆ. ಅದನ್ನು ಕುಡಿದು ನೀನು ಸ್ವಲ್ಪ ವಿಶ್ರಮಿಸು, ಅಂದರೆ ನಿನಗೆ ಸ್ವಲ್ಪ ಬಲಬರುವದು. ಇಂದಿನ ವರೆಗೆ ನಾನು ಮಾಡಿದ ಎಲ್ಲ ಅಪರಾಧಗಳನ್ನು ಕ್ಷಮಿಸು; ಮತ್ತು ಈಗ ನಾನು ಹೇಳಿದಂತೆ ನೀನು ವರ್ತಿಸು!—(ಅವಳನ್ನು ಎತ್ತಿಕೊಳ್ಳುವದಕ್ಕೆ ಹೋಗುತ್ತಾನೆ.)

**ಸಖೂದೇವಿ**—ಛೆ-ಛೆ- ಅದೇನೂ ಬೇಡ. ನಾನೇ ನಡೆದು ಬರುತ್ತೇನೆ. ಈ ನಿಮ್ಮ ಮಧುರ ಮಾತುಗಳನ್ನು ಕೇಳಿ ನನ್ನ ದುರ್ಬಲತೆಯು ಹೋಗಿ, ನನಗೆ ಚನ್ನಾಗಿ ಬಲಬಂದಿದೆ; ಆದರೆ ನಾನು ನಿಮ್ಮ ಶಯನ ಮಂದಿರದಲ್ಲಿರವದನ್ನು ಅತ್ತೆಯವರು ನೋಡಿದರೆ ಏನಂದಾರು? ಇನ್ನು ಮುಂದೆ ನಾನಂತೂ ಅತ್ತೆಯವರ ವಿರುದ್ಧ ಒಂದು ಕಾರ್ಯವನ್ನೂ ಮಾಡುವದಿಲ್ಲ. ದೇವರ ಸ್ಮರಣೆ-ಮಾಡುವದಿಲ್ಲ; ಮೂರ್ತಿಯನ್ನು ಹತ್ತಿರ ಇಟ್ಟುಕೊಳ್ಳುವದಿಲ್ಲ; ಇದೋ ನೋಡಿರಿ–ನಿಮ್ಮೆದುರಿಗೇ ಇದನ್ನು–ಚೆಲ್ಲಿಬಿಡುತ್ತೇನೆ! ಈ ವರೆಗೆ ನಾನು-ನಿಮ್ಮ ಪ್ರೇಮ ಸಂಪಾದನೆಗಾಗಿ ತಪಶ್ಚರ್ಯ ಮಾಡುತ್ತಿದ್ದೆ,

ಅದು ಶಿದ್ಧಿಯಾದ ಮೇಲೆ, ಅವೆಲ್ಲ ಇನ್ನೇತಕ್ಕೆ ಬೇಕು. ಈ ದೇವರ ಪೂಜೆಯೇ ನನಗೆ ಇನ್ನು ಕರ್ತವ್ಯವು!—

**ಮಾಧವ**— ಅಹಹಾ—ಎಂಥ ಮಧುರ ಮಾತುಗಳಿವು! ಇದೋ—ಪ್ರಿಯೇ ನೀನು ಹೆಚ್ಚು ಮಾತಾಡಬೇಡ; ಯಾಕಂದರೆ ನಿನಗೆ ವೃಥಾಶ್ರಮ ವಾದೀತು. ನೀನು ನಡೆಯುತ್ತ ಬಂದರೆ, ನಾನು ಕೇಳುವದಿಲ್ಲ— ಎತ್ತಿಕೊಂಡೇ ಹೋಗುತ್ತೇನೆ.

ರಾಗ ಯಮುನ, ತಾಳ ತ್ರಿವಟ

**ಕೋಮಲೆ ನಾನು ನೀಚತಮನೆ ನಿರ್ದಯನೆ । ವೃಥಾ ಬಳಲಿಸಿದೆನೆ ॥ ಪಲ್ಲ ॥ ದೇವಿ ಎನ್ನೊಳತಿ ಕೋಪಗೈಯದೆ । ಸೇವಿಪ ದಾಸನ ಕ್ಷಮಿಸು ತವಕದೆ । ಪಾವನಾಂಗಿ ಅತಿ ಮೋದದಿಂದಲಿ ಭಾವಿಸು ಮಾನಿತಳೇ ॥ ೧ ॥**

(ಮಾಧವನು ಅವಳ ಕೈ ಹಿಡಿಯುವನು) (ತೆರೆ ಬೀಳುವದು)

---

## ೫ ನೇ ಪ್ರವೇಶ.

(ಸ್ಥಳ:—ಮಾಧವನ ಶಯ್ಯಾಗಾರ. ಸಖೂದೇವಿಯು ಹಾಸಿಗೆಯಲ್ಲಿ ಮಲಗಿರು ವಳು.)

**ಮಾಧವ**—ಅಯ್ಯೋ ನಾನೆಂತಹ ಪಾಪಿಯು! ಆ ದುಷ್ಟ ತಾಯ ಮಾತು ಗಳನ್ನು ಕೇಳಿ, ನಾನು ಇವಳನ್ನು ಎಷ್ಟು ಪೀಡಿಸಿದೆನಲ್ಲ—

ರಾಗ ಲಲತ, ತಾಳ ತ್ರಿವಟ

**ಖಲಮತಿ ನಾ ನಿಜದೆ ಪಾಪಿಯಾದೆ । ಲಲನೆಯ ಬರಿದೆ ನಿರುತ ಪೀಡಿಸಿದೆ । ಅಧಮ ಮದಾಂಧಾ ಮಹಾದ್ರೋಹಿ ॥ ಪಲ್ಲ ॥ ದುರುಳ ಜನನೀ ಬೋಧವ ಕೇಳಿ । ಬರಿದೆ ಪ್ರಿಯ । ಸತಿಮಣಿಯ । ಅರರೆ ಮಹಾನೀಚ ಕೃತಿಯ ನೆಸಗಿ । ನರಲೋಕಕೆ ಭಾಜನನಾದೆ ॥ ೧ ॥** (ಚಂಡಿಕಾಬಾಯಿ ಮತ್ತು ಪದ್ಮಾವತಿ ಬರುತ್ತಾರೆ)

**ಚಂಡಿಕಾಬಾಯಿ**—(ಆಶ್ಚರ್ಯದಿಂದ) ಎಲಾ ನಾನಿದನ್ನೇನು ನೋಡುತ್ತಿದ್ದೇನೆ! ಆ ಆನಂದಾಬಾಯಿಯು ನನ್ನನ್ನು ಕರೆದುಕೊಂಡು ಹೋಗಿ, ಆಗ್ರಹ ಮಾಡಿ ಕಬ್ಬಿನ ಹಾಲು ಕುಡಿಯಕೊಟ್ಟಳು. ಅದರಲ್ಲಿ ಭಂಗಿಯನ್ನು ಬೆರೆಸಿದಳೋ ಏನು! ನನ್ನ ಕಣ್ಣೆದುರು— ಕಾಣಿಸುತ್ತಿರುವ ಇವನು ಮಾಧವನೋ ಅಥವಾ ಇನ್ನಾರೋ—;

ಇವಳು—ಈ ನನ್ನ ವೈರಿ—ಸಖೂದೇವಿಯೋ ಅಥವಾ ಇನ್ನಾರೋ ಬೇರೆಯವಳೋ (ಅತ್ತೆಯನ್ನು ನೋಡಿ ಸಖೂದೇವಿಯು ಏಳಹೋಗುವಳು)

**ಮಾಧವ**—ಏನೇ ನೀನು ಏಳಬೇಡ; ಹಾಗೇ ಮಲಗು. ನಿನಗೀಗ—ಈಚೆಯ ಕೈಯನ್ನು—ಆಚೆಗೆ ಮಾಡುವಷ್ಟು ಕೂಡ ತ್ರಾಣವಿರುವದಿಲ್ಲ; ಅಂದಮೇಲೆ ಸುಮ್ಮನೆ ಯಾತಕ್ಕೆ ಆಯಾಸಮಾಡಿಕೊಳ್ಳುವೆ? ಹಿರಿಯರ ಮಾನವನ್ನು ಕಾಯಬೇಕು; ಹೌದು—ಆದರೆ ಅದು ಯಾವಾಗ್ಗೆ ?—

**ಚಂಡಿಕಾಬಾಯಿ**—ಪದ್ಮಾವತೀ— ಈತನು ಮಾಧವನೇ— ಅಹುದೇನು ; ಅಥವಾ ನನಗೇ ಭ್ರಾಂತಿಯೋ—?

**ಪದ್ಮಾವತಿ**—ಅಮ್ಮಾ ಈತನು ನಮ್ಮ ಮಾಧವನೇ ಹೌದು: ಆದರೆ ಇದೋ ನೋಡು— ಈತನು ತನ್ನ ಹೆಂಡತಿಯ ಕಾಲುಗಳನ್ನು ಒತ್ತುತ್ತಿರುವನು !

**ಮಾಧವ**—ಏನೇ ನಿನಗೆ ಯಾವ ಸಂಕೋಚವೂ ಬೇಡ. ಇದೋ ಈ ಕಾಸಿದ ಹಾಲನ್ನು ಮೊದಲು ಕುಡಿ; ಅಂದರೆ ನಿನಗೆ ಹಿತವಾಗುವದು.

**ಸಖೂದೇವಿ**—ಅದೇನು—! ನಾನು ಸ್ವಲ್ಪ ಮೇಲೆ ಏಳುತ್ತೇನೆ. ಹಿರಿಯರು ಬಂದಾಗ—

**ಮಾಧವ**—ನೀನು ಸಶಕ್ತಳಾದಮೇಲೆ ಹಿರಿಯರ ಮಾನವನ್ನು ಬೇಕಾದಷ್ಟು ಕಾಯುವಿಯಂತೆ. ಸದ್ಯಕ್ಕೆ ನನಗೆ—ಹಿರಿಯರೂ ಬೇಡ; ಕಿರಿಯರೂ ಬೇಡ !

**ಚಂಡಿಕಾಬಾಯಿ**—ಎಲಾ ಚಾಂಡಾಲಾ—ಮಾಧವಾ—ಖೋಡೀ ಹೀಗೇಕೆ ಮಾಡುವಿಯೋ—ಯಾರೋ ಅವಳು—ಅವಳೇ ಏನೋ ಆ ಪೀಡಾ—ಸಖೂ—(ಸಖೂದೇವಿಯನ್ನು ಒದೆಯ ಹೋಗುವಳು)

**ಮಾಧವ**—ಅಮ್ಮಾ ನೀನು ಅವಳನ್ನು ಮುಟ್ಟಿದರೆ ನೋಡು,—ದೂರ ನಿಂತು ಮಾತಾಡು; ಆದರೆ ನಿನಗೂ ನನ್ನಂತೆ ಅವಳ ಸೇವೆ ಮಾಡುವದಿದ್ದರೆ ಮಾತ್ರ.—ಅವಳ ಅಂಗಸ್ಪರ್ಶ ಮಾಡು.

**ಚಂಡಿಕಾಬಾಯಿ**—ಓಹೋ ಹೀಗೋ— ನೋಡು ಹಾಗಾದರೆ— ನಾನು ಮಾಡುವ ಸೇವೆಯನ್ನು—(ಮುಂದೆ ಬರಲು ಯತ್ನ ಮಾಡುವಳು)

**ಮಾಧವ**— ಅಮ್ಮಾ ಖಂಡಿತವಾಗಿ ಹೇಳುತ್ತೇನೆ-ನೀನು ಅವಳ ಸಮೀಪದಲ್ಲಿದ್ದು- ಆರೈಕೆ ಮಾಡಬೇಕು; ಅಷ್ಟು ನಾಜೂಕಾಗಿದೆ ಅವಳ ಸ್ಥಿತಿ !—(ಸಖೂದೇವಿಯು ಏಳಯತ್ನಿಸುವಳು) ಏನೇ ನಾನು ಹೇಳಲಿಲ್ಲವೆ? ನೀನು ಸುಮ್ಮನೆ ಮಲಗು.

**ಚಂಡಿಕಾಬಾಯಿ**—ಏನು ಮಲಗಿರಬೇಕೆ! ನೋಡುತ್ತೇನೆ ಹೇಗೆ ಮಲಗುತ್ತಾಳೋ ಆದನ್ನು- ಒಂದು ಒದಿಕೆ ಹಾಕಿದರೆ—(ಒದೆಯ ಹೋಗುವಳು. ಮಾಧವ ಅವಳ ಕಾಲುಗಳನ್ನು ಹಿಡಿಯುಹೋಗುವನು)

**ಮಾಧವ**— ಅಮ್ಮಾ-ಇಂದಿನಿಂದ ಈ ಕಾಲುಗಳು-ನಮ್ಮಿಂದ ನಮಸ್ಕಾರಗಳನ್ನಷ್ಟೇ ತಕ್ಕೊಳ್ಳುವವು; ಆದರೆ ಒದಿಕೆ ತಿನ್ನುವ ದಿನಗಳು ಹಿಂದೇ ಹೋದವು!

**ಚಂಡಿಕಾಬಾಯಿ**—ಎಲಾ ನೀಚಾ ನೀನಿಷ್ಟು ತಲೆಗೇರಿದೆಯಾ—; ಅವಳನ್ನು ಹೊಡೆಯಬಂದರೆ-ಕೈಹಿಡಿಯುವಿ; ಒದೆಯ ಬಂದರೆ ಕಾಲು ಹಿಡಿಯುವಿ; ಖಂಡಿತವಾಗಿ ಅವಳು ನಿನಗೆ- ಮಾಟವನ್ನೇ ಮಾಡಿಸಿರಬೇಕು; ಹಾಗೆಂದೇ ನಿನ್ನ ಪಾಡು ಹೀಗಾಗಿ ಹೋಗಿರುವದು; ಮತ್ತು ಅಷ್ಟು ಬದಲಾಗಿ ಹೋಗಿರುವೆ; ಹೀಗಾಗುವದಕ್ಕಿಂತಲೂ ನೀನು ಸತ್ತು ಹೋಗಿದ್ದರೇ—ಚನ್ನಾಗಿತ್ತು !—

**ಪದ್ಮಾವತಿ**—(ಆಶ್ಚರ್ಯದಿಂದ) ಹೂ ಹೀಗೇನು !

**ಸಖೂದೇವಿ**—(ಸ್ವಲ್ಪ ಎದ್ದು ಕೈಮುಗಿದು) ಬೇಡ. ಬೇಡ- ಅತ್ತೆಯವರೇ-ಹೀಗೆ ಅಮಂಗಲವನ್ನು ನುಡಿಯಬೇಡಿ. ನನಗೆ ಸ್ವಲ್ಪ ಗುಣವಾಗಲಿ; ಅಂದರೆ- ನಾನು ನಿಮ್ಮ ಮಾತನ್ನು ಮೀರಿ ಒಂದು ಗಳಿಗೆ ಸಹ ನಡೆಯುವದಿಲ್ಲ; ವಿಠ್ಠಲನ ಸ್ಮರಣೆಯನ್ನು ಮಾಡುವದಿಲ್ಲ; ಮತ್ತು—ನಿಮಗೆ ಬೇಡವಾದ ಆ ಮೂರ್ತಿಯನ್ನು ಆಗಲೇ ನಾನು ಬಿಸಾಕಿದ್ದೇನೆ! ದಯಮಾಡಿ ಇನ್ನುಮುಂದೆ ನೀವು ನನ್ನ ಮೇಲಿನ ಕೋಪವನ್ನು ಬಿಡಬೇಕೆಂದು ನಾನು ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ. (ಅತ್ತೆಯ ಕಾಲು ಹಿಡಿಯಲು ಹೋಗುತ್ತಾಳೆ. ಅವಳು ಒದೆಯಲು ಯತ್ನಿಸುತ್ತಾಳೆ. ಆದರೆ ಕಾಲುಗಳೇ ಏಳುವದಿಲ್ಲ.)

**ಚಂಡಿಕಾಬಾಯಿ**—(ಆಶ್ಚರ್ಯದಿಂದ) (ಸ್ವಗತ) ಎಲಾ ಇದೇನು ನಾನು

ಇವಳನ್ನು ಒದೆಯು ಹೋದರೆ, ನನ್ನ ಕಾಲುಗಳೇ ಏಳುವದಿಲ್ಲವಲ್ಲ; ಕಾಲುಗಳಲ್ಲಿಯ ನಾಡಿಗಳು ಸತ್ತು ಹೋದಂತಾಗಿ, ತೀರ ನಿಶ್ಶಕ್ತ ವಾಗಿರುವವು; ಮತ್ತು ಮನಸ್ಸಿನಲ್ಲಿ ಇವಳ ಬಗ್ಗೆ ದಯಾಪೂರಿತ ವಿಚಾರಗಳು ಬರುತ್ತಿರುವವು. ಇದಾವುದಾದರೂ ಮಂತ್ರಶಕ್ತಿ ಇದ್ದೀತೆ! ಹೌದು ಹಾಗೇ ಇದ್ದೀತು! ಏನೀ–ಇವಳ ಕಣ್ಣೊಳಗಿನ ಹೊಳಪು; ನೆಟ್ಟನೋಟದಿಂದ ಇವಳ ಕಡೆಗೆ ನೋಡುವದಕ್ಕೆ ಆಗುವದಿಲ್ಲ. ನನ್ನ ಈ ಬದಲಾದ ಮನೋವೃತ್ತಿಯನ್ನು ಇವಳಿಗೆ ತೋರಗೊಡಬಾರದು. (ಪ್ರಕಾಶ) ಪದ್ಮಾವತೀ ನಡೆ ಹೋಗೋಣ; ನನಗೆ ಇಲ್ಲಿ ನಿಲ್ಲಲು ಮನಸ್ಸಾಗಲೊಲ್ಲದು. ಈ ಒಂದು ರಾತ್ರಿ ಈ ಮನೆಯಲ್ಲಿ ಹೇಗಾದರೂ ನೂಕಿ, ನಾಳೆ ಎಲ್ಲಿಯಾದರೂ ಹೊರಟುಹೋಗುತ್ತೇನೆ. ನೀನು ನಿನ್ನ ಅತ್ತೆಯ ಮನೆಗೆ ಹೋಗು. ನೋಡು– ನೋಡು– ಅವನು– ಅವಳನ್ನು– ಹೇಗೆ ಕೈಹಿಡಿದು ಮಲಗಿಸುತ್ತಾನೆ.

**ಪದ್ಮಾವತಿ**—ಅಮ್ಮಾ ನಾನು ನಿನಗೆ ಆಗಲೇ ಹೇಳಲಿಲ್ಲವೆ; ಮಾಧವನು ಕೇವಲ ಸ್ತ್ರೀವಶನಾಗಿರುವನೆಂದು!

**ಮಾಧವ**—ಪದ್ಮಾವತೀ–ಈಗೆರಡು ದಿನಗಳಿಂದ ಇವಳಿಗೆ ಅನ್ನದ ದರ್ಶನವೇ ಇಲ್ಲ; ಸ್ವಲ್ಪ ಅನ್ನ ತಂದು ಉಣಿಸಬಾರದೆ––

**ಪದ್ಮಾವತಿ**—ಏನು– ನಾನು– ಅನ್ನ ತಂದು ಉಣಿಸಬೇಕೆ?—

**ಚಂಡಿಕಾಬಾಯಿ**—ಹಾಕು. ಎರಡು ಜೋಡಿನಿಂದ ಏಟುಗಳನ್ನು–ಅದೇ ಇವಳಿಗೆ ಅನ್ನ—!

**ಮಾಧವ**—ತರುವದಿಲ್ಲವೇ– ಬಿಡು. ನಾನೇ ತಂದು ಹಾಕುತ್ತೇನೆ.

**ಚಂಡಿಕಾಬಾಯಿ**—ಏನು– ನೀನೇ ಅನ್ನಮಾಡಿ ಇವಳಿಗೆ ಉಣಿಸುವಿಯಾ?— ಎಲಾ ಹೆಂಗಸಿನಂಥವನೇ– ನಿನ್ನ ಸ್ಥಿತಿ ಹೀಗೇಕಾಯಿತೋ? ದೇವರೇ–ಇಂಥಾ ಅವಮಾನವನ್ನು ಸಹಿಸುವದಕ್ಕಿಂತ, ನನ್ನ ಕಣ್ಣುಗಳನ್ನೇ ಮುಚ್ಚಿಬಿಡು! ಇನ್ನು ಮುಂದೆ ಈ ಚಾಂಡಾಲ ಮಗನು– ನನಗೆ– ಇವಳ ಸೇವೆ ಮಾಡುವದಕ್ಕೇ

ಹಚ್ಚುವನು. ಛೀ- ಛೀ- ನನಗೆ- ಇಲ್ಲಿ ನಿಲ್ಲುವದಕ್ಕೇ ಮನಸ್ಸಾಗಲೊಲ್ಲದು! ನಡೆ ನಡೆ- ಪದ್ಮಾವತಿ- ಹೋಗೋಣ! (ಹೋಗುವರು)

**ಮಾಧವ**—ಪ್ರಿಯೇ ಈಗಾದದ್ದೇ ಚನ್ನಾಯಿತು. ಇನ್ನು ಮುಂದೆ ತಾಯಿ-ತಂದೆ ಅವರು-ಇವರು ನಿನ್ನ ಹೆಸರನ್ನೇ ತೆಗೆಯದಂತೆ ನಾನು ನೋಡಿಕೊಳ್ಳುತ್ತೇನೆ; ಮತ್ತು ನೀನು ಆಗಲೇ ನಿಶ್ಚಯ ಮಾಡಿದಂತೆ ಇನ್ನುಮುಂದೆ ವರ್ತಿಸುತ್ತ ಹೋದರೆ, ಅವರು ತಾವಾಗಿಯೇ ನಿನ್ನನ್ನು ಪ್ರೀತಿಸುತ್ತ ಹೋಗುವರು. ಇದೋ ಈ ಕಾಸಿದಹಾಲು ಕುಡಿ ಅಂದರೆ ಸ್ವಲ್ಪ ನಿದ್ರೆ ಬರುವದು.

**ಸಖೂದೇವಿ**—ಅತ್ತೆಯವರ ಪ್ರೇಮಸಂಪಾದನೆಯೊಂದೆ ನನಗೆ-ಇನ್ನುಳಿವ ಕರ್ತವ್ಯಗಳಲ್ಲಿ ಮೊದಲನೆಯದು; ಮತ್ತು ಅದಕ್ಕಾಗಿಯೇ ನಾನಿನ್ನು ಯತ್ನಿಸುತ್ತೇನೆ. ನಾನು ಮಲಗುತ್ತೇನೆ-ಆದರೆ ನೀವು, ಹಾಗೇ ಕುಳಿತೇ ಇರುವಿರಾ—?

**ಮಾಧವ**—ನಿನಗೆ ನಿದ್ರೆ ಹತ್ತುವತನಕ ನಾನು ಕುಳಿತೇ ಇರುತ್ತೇನೆ; ಆಮೇಲೆ ವಿಶ್ರಮಿಸುವೆನು; ಆದರೆ ಆಗಲೇ ನಾನು ಹೇಳಿದಂತೆ ನೀನು ನನ್ನ ಆಜ್ಞೆಯಂತೇ ವರ್ತಿಸುವಿಯಲ್ಲವೆ?

**ಸಖೂದೇವಿ**—ಅದರಲ್ಲಿ ನಿಮಗೆ-ಇನ್ನೂ ಸಂಶಯವೆ?

**ಮಾಧವ**—ಹಾಗಾದರೆ ಈಗ ನೀನು ಸುಮ್ಮನೆ ಮಲಗು (ಅವಳಿಗೆ ತುಂಬ ಹೊದಿಸುವನು) (ಸ್ವ.) ಎಂಥ ವಿಚಿತ್ರ ಪರಿವರ್ತನೆ ಇದು! ಯಾವಳನ್ನು ನಾನು ಈವರೆಗೂ ಪರಿಪರಿಯಾಗಿ ಪೀಡಿಸಿದೆನೊ, ಅದೇ-ಆ ನನಗೆ ಈಗ ಇವಳ ಸೇವೆಯನ್ನು ಎಷ್ಟು ಮಾಡಿದರೂ ತೃಪ್ತಿಯಾಗಲೊಲ್ಲದು. ಓಹೋ ಈಗ ಇವಳಿಗೆ ನಿದ್ರೆ ಹತ್ತಿತು. ಒಳಗೆ ಹೋಗಿ ಮಾತೋಶ್ರೀಯವರು ಏನು ನಡಿಸಿದ್ದಾರೋ ನೋಡೋಣ. ನನಗೆಲ್ಲಿಂದ ಷ್ಟ ಇಧೈರ್ಯ ಬಂತಪ್ಪಾ! ಅಂತೂ ಪ್ರಸಂಗವಂತೂ ಪಾರಾಯಿತು.

ರಾಗ ಕಾಂಬೋಧಿ, ತಾಳ ತ್ರಿವಟ

**ಮುದವಾಂತೆ ನಾನೀಸನಿಯ ನವಲೋಕಿಸಿ। ಜನನಿಯ ಕೋಪವನು ಲಕ್ಷಿಸದೆ।**
**ವನಿತೆಯನು ಸಂತೈಸಿದೆ ಧೀರನಾದೆ ॥ ೧ ॥**

---

# ೬ ನೇ ಪ್ರವೇಶ

ಸ್ಥಳಃ— ಕೃಷ್ಣಾ ತೀರ. ಕಾವೇರಿ–ಅನುಸೂಯಾ–ಮತ್ತು. ಒಡವೆಗಳಿಂದ ಹಾಗೂ ಉತ್ತಮವಾದ ವಸ್ತ್ರಗಳಿಂದ ಅಲಂಕೃತಳಾದ–ಸಖೂದೇವಿಯು ಬರುವರು

**ಅನಸೂಯಾ**—ಸಖೂದೇವೀ— ನೀನೀಗ— ಪ್ರತ್ಯಕ್ಷಲಕ್ಷ್ಮಿಯಂತೇ ಕಾಣುವಿ!

**ಸಖೂದೇವಿ**—ನಾನೀಗ ಪದ್ಮಾವತಿ ಅತ್ತಿಗೆಯವರ ಉಪದೇಶದಂತೆ ನಡೆಯುತ್ತಿದ್ದೇನೆ. ಅವರು ನನಗೆ ಮೊದಲಿನಿಂದಲೂ, ಸೊಬಗು ಮಾಡಿಕೊಂಡು ಒಯ್ಯಾರ ಮಾಡುತ್ತಿರಬೇಕೆಂದು, ಹೇಳುತ್ತಿದ್ದರು. ಆಗ ಅವರ ಮಾತು ಕೇಳಲಿಲ್ಲ. ಈಗ ಅವರ ಉಪದೇಶವನ್ನು ದಾಟಿ, ಅಷ್ಟೇ ಅಲ್ಲ– ಅವರು ಹೇಳಿದ್ದಕ್ಕಿಂತ ಇಮ್ಮಡಿಯಾಗಿ ನಾನು ಆಚರಣೆ ಮಾಡಬೇಕೆಂದು, ನಿಶ್ಚಯ ಮಾಡಿದ್ದೇನೆ. ಅದರ ಪರಿಣಾಮವೋ ಏನೊ ಇಂದು ಇವರು– ಈ ಒಡವೆಗಳನ್ನು ಪೆಟ್ಟಿಗೆಯೊಳಗಿನಿಂದ ತೆಗೆದು ನನ್ನ ಮುಂದಿರಿಸಿದರು; ಮತ್ತು ಈ ಪೀತಾಂಬರವನ್ನು ಅವರೇ ಕೊಟ್ಟರು; ಒಂದೆರಡು ಸಲ ನಾನು ಬೇಡವೆಂದು ಅಂದೆ; ಬಹಳ ಬಲವಂತ ಕಂಡಿತು; ಧರಿಸಿಕೊಂಡೆ! ಇನ್ನು ಸ್ವಲ್ಪ ದಿನ ಹೋಗಲಿ; ಆಗ ನೀವೆ ನೋಡೀರಂತೆ ಅತ್ತೆಯವರ ಮನಸ್ಸನ್ನೂ ನಾನು– ಹೇಗೆ ಒಲಿಸಿಕೊಳ್ಳುತ್ತೇನೆಂಬುದು.

**ಅನುಸೂಯಾ**—ಸಖೂದೇವಿ ಈ ನಿನ್ನ ಸೌಭಾಗ್ಯವನ್ನು ನೋಡಿ, ಪದ್ಮಾವತಿಯು ಅದೆಷ್ಟು ಉರಿಯುವಳೋ ಏನೊ! ಈ ಸಂಗತಿಯು ಅವಳಿಗೆ ಇನ್ನೂ ತಿಳಿದಂತೆ ಕಾಣುವದಿಲ್ಲ.

**ಸಖೂದೇವಿ**—ತಿಳಿದಿದ್ದೀತು. ತಿಳಿಯದೇ ಹೇಗಿದ್ದೀತು! (ಆಚೆಗೆ ನೋಡಿ) ಅದೋ ಅನುಸೂಯೇ ಅಲ್ಲಿ ಯಾರು ಬರುತ್ತಿರುವರು?

**ಕಾವೇರಿ**—ಸಖೂದೇವೀ ಅವರು ನಿಮ್ಮ ಪತಿರಾಜರು. ಸವಾರಿಯು ನೆಟ್ಟನೋಟದಿಂದ ನಿನ್ನನ್ನೇ ನೋಡುತ್ತ ಹೊರಟಿರುವದು. ಸಖೂದೇವೀ ಅವರಿಗೆ ಈಗ ನಿನ್ನ ಹುಚ್ಚೇ ಹಿಡಿದು ಹೋಗಿರುವದು.

**ಸಖೂದೇವಿ**— ಸರಿ- ಅದರಲ್ಲೇನು ಕೆಟ್ಟದ್ದಾಯಿತು—?

**ಅನುಸೂಯಾ**— ಕೆಟ್ಟದ್ದೇನೂ ಅಲ್ಲ; ಆದರೆ ಒಂದೇ ದಿವಸದಲ್ಲಿ ಅದೆಷ್ಟು ವ್ಯತ್ಯಾಸನಾಯಿತಲ್ಲ ಅದೇ ನನಗೆ ಆಶ್ಚರ್ಯ.

**ಕಾವೇರಿ**— ಆಶ್ಚರ್ಯವಾಗುವಂಥ ಸಂಗತಿಯೇ ನಿಜ. ನಡೆಯಿರಿನ್ನು ಹೊತ್ತಾಯಿತು ಹೋಗೋಣ.

**ಸಖೂದೇವಿ**— ನಡೆಯಿರಿ—(ಅಷ್ಟರಲ್ಲಿ ಪದ್ಮಾವತಿಯು ಬರುವಳು. ಸಖೂದೇವಿಯನ್ನು ನೋಡುತ್ತ ಚಕಿತಳಾಗಿ ನಿಲ್ಲುವಳು.) ಯಾಕೆ ಪದ್ಮಾವತೀ ಅತ್ತಿಗೆಯವರೇ ನನ್ನ ವಸ್ತ್ರಾಲಂಕಾರಗಳನ್ನು ನೋಡುತ್ತ ಹೀಗೆ ನಿಂತುಬಿಟ್ಟಿರಿ! ಇದೆಲ್ಲ ನಿಮ್ಮ ಉಪದೇಶದ ಪರಿಣಾಮವೇ—!

**ಪದ್ಮಾವತಿ**— ಅಂದರೆ— ಅಮ್ಮನೇ ಈ ವಸ್ತ್ರಾಲಂಕಾರಗಳನ್ನು ತೆಗೆದು ಕೊಟ್ಟಳೇ ?

**ಸಖೂದೇವಿ**— ನನ್ನ ಮುಂದೆ ತಂದಿಟ್ಟರು–ನಾನು ಧರಿಸಿಕೊಂಡೆ. ನೀವೇ ಉಪದೇಶ ಮಾಡುತ್ತಿದ್ದಿರಲ್ಲವೇ– ದೇವರ ನಾಮಸ್ಮರಣೆ ಮಾಡಬೇಡವೆಂದು; ಮತ್ತು ನನ್ನ ದೇವರಮೂರ್ತಿಯನ್ನು ನೋಡಿದ ಕೂಡಲೇ ನಿಮಗೆ ಸಿಟ್ಟೇ ಬರುತ್ತಿತ್ತು; ಈಗ ಅವೆರಡಕ್ಕೂ ನಾನು ಸೊನ್ನೆ ಹಾಕಿದ್ದೇನೆ. ಇನ್ನೂ ಮುಂದೆ—

**ಪದ್ಮಾವತಿ**— ಇನ್ನೂ ಮುಂದೆ—?

**ಸಖೂದೇವಿ**— ನಾನು ಇನ್ನು ಮುಂದೆ ನಿಮ್ಮ ಗುರುಪದೇಶದಂತೆಯೇ ನಡೆಯಬೇಕೆಂದು ನಿರ್ಧಾರ ಮಾಡಿದ್ದೇನೆ; ಅಷ್ಟೇ ಅಲ್ಲ–ಗುರುವಿನ ಉಪದೇಶ ಒಂದು ಪಟ್ಟಾದರೆ, ಶಿಷ್ಯನು ಮಾಡುವದು ಹತ್ತು ಪಟ್ಟು ತಿಳಿಯಿತೇ? ಈಗಾಗಲೇ ನಾನು ಗುರುವಿಗೂ ಅಸಾಧ್ಯವಾದ ಕೆಲಸವನ್ನು ಮಾಡಿದ್ದೇನೆ; ಮುಂದೂ ಅದೇ ಧೋರಣೆಯನ್ನೇ ಇಟ್ಟುಕೊಳ್ಳುವೆ!

**ಪದ್ಮಾವತಿ**—(ವ್ಯಂಗ್ಯವಾಗಿ) ಕಾವೇರಿ– ಅನುಸೂಯಾ– ನೋಡಿದಿರಾ ಹೇಗಿರುವದು– ಏಟುಗಳ ಪ್ರಭಾವ. ಆ ದಿನ ನಾನು ಮರೆಯಾಗಿ ನಿಂತು, ಇವಳ ಮಾತುಗಳನ್ನು ಕೇಳಿ, ಚಂಡಿಕಾಬಾಯಿಗೆ ತಿಳಿಸದೇ

ಹಾಗೆ ಬಿಟ್ಟುಬಿಟ್ಟಿದ್ದರೆ, ಇವಳು ಯಾವನಾದರೂ ಓರ್ವ ಪಂಢರಪುರದ ಲಕ್ಕ ಯಾತ್ರಿಕಾರನ ಬೆನ್ನು ಹತ್ತಿ ಹೋಗಿಯೇ ಬಿಡುತ್ತಿದ್ದಳು; ಮತ್ತು ಪಂಢರಪುರದ ಬೀದಿಬೀದಿಯಲ್ಲಿ ಭಿಕ್ಷೆ ಬೇಡುತ್ತಿದ್ದಳು; ಆದರೆ ಇಂದಿನ ಈ ಆಗಿನ ಬಡಿವಾರವನ್ನು ನೋಡಿದಿರಾ? ಚಂಡಿಕಾಬಾಯಿಯು ಒಡವೆ ಕೊಟ್ಟದ್ದು, ನನ್ನ ಉಪಕಾರವೆಂದು ತಿಳಿ; ಆದರೆ ಇಷ್ಟರಲ್ಲಿ ಅವರು ನಿನ್ನನ್ನು ಹೊರಗೆ ಹೋಗಗೊಟ್ಟದ್ದು ಆಶ್ಚರ್ಯವೇ ಸರಿ.

**ಸಖೂದೇವಿ**—ಛೆ. ಇದರಲ್ಲೇನು ಆಶ್ಚರ್ಯ! ಇದಕ್ಕೂ ಹೆಚ್ಚಿನ ಆಶ್ಚರ್ಯ ಇನ್ನು ಮುಂದೆ ನೋಡುವಿರಂತೆ!

**ಪದ್ಮಾವತಿ**—ಹೂ-ಹೂ-ಈಗಾಗಲೇ ಅಭಿಮಾನದ ಸಂಚಾರವಾಯಿತೇ?

**ಸಖೂದೇವಿ**—ಪದ್ಮಾವತಿ ಅತ್ತಿಗೆಯವರೇ ನೀವು ನನ್ನ ಮೇಲೆ ಬಹಳ ಉಪಕಾರ ಮಾಡಿದಿರಿ: ಅದನ್ನು ನಾನು ಇಡೀ ಜನ್ಮ ಮರೆಯುವದಿಲ್ಲ. ಇದೇ ರೀತಿ ತಮ್ಮ ಅಭಿಮಾನ ನನ್ನ ಮೇಲಿರಲಿ. ನಿನ್ನೆ ಇಡೀ ದಿನ ಮನೆಯ ಕಡೆಗೆ ಹಾಯಲಿಲ್ಲ. ನಾಳೆ ತಪ್ಪಿಸಬೇಡಿ.

**ಪದ್ಮಾವತಿ**—ಬರದೇ ಹೇಗಿದ್ದೇನು! ಈ ನಿಮ್ಮ ಸಡಗರವನ್ನು ಮಾಧವರಾಯನು ನೋಡಿರುವನೊ; ಅಥವಾ ಇಲ್ಲವೋ?

**ಅನುಸೂಯಾ**—ಪದ್ಮಾವತೀ ಅದನ್ನೇನು ಕೇಳುವೀ ಆವರೇ ಇವಳಿಗೆ ಪೆಟ್ಟಿಗೆಯೊಳಗಿಂದ ತೆಗೆದು, ಈ ಆಭರಣಗಳನ್ನು ಕೊಟ್ಟರು; ಮತ್ತು ಸ್ವತಃ ಪೇಟೆಗೆ ಹೋಗಿ ಈ ಭರ್ಜರಿ ಶಾಲನ್ನು ತಂದು ಕೊಟ್ಟರು!

**ಪದ್ಮಾವತಿ**—(ಆಶ್ಚರ್ಯದಿಂದ) ಹೂ ಹೀಗೇನು!

**ಅನುಸೂಯಾ**—ಮತ್ತು ಅವರೇ ತಾಯಿ ಇಲ್ಲದಾಗ ನೆಲಮನೆಯ ಬೀಗವನ್ನು ಕಲ್ಲಿನಿಂದ ಒಡೆದು ಇವಳ ಬಂಧನವನ್ನು ಬಿಡಿಸಿ, ತಮ್ಮ ಶಯ್ಯಾಗಾರಕ್ಕೆ ಕರೆದೊಯ್ದರು; ಹಾಗೇ ಅಲ್ಲ; ಎತ್ತಿಕೊಂಡು— ತಿಳಿಯಿತೇ?

**ಪದ್ಮಾವತಿ**—ಸಾಕು ಬಿಡಿರೇ ಏನಾದರೂ ಹೇಳುತ್ತೀರಿ! ಆದಕ್ಕೇನಾದರೂ ರೀತಿ ಬೇಡವೆ!

**ಅನುಸೂಯಾ**—ಮೊದಲು ನಿಮ್ಮ ಮಾಧವರಾಯರು–ಸಖೂದೇವಿಯು ಸೇವೆಗೆ ಹೋದರೆ ಹೇಸಿಗೊಳ್ಳುತ್ತಿದ್ದರು. ಆದರೆ ಅವರೇ ಈಗ ಇವಳ ಸೇವೆ ಮಾಡುತ್ತಿದ್ದಾರೆ. ಕಾಲೊತ್ತುತ್ತಾರೆ–ಅನ್ನಮಾಡಿ ಇವಳಿಗೆ ಉಣಿಸುತ್ತಾರೆ. ತಿಳಿಯಿತೇ?

**ಸಖೂದೇವಿ**—ಅದೆಲ್ಲ ಅವರಿಗೆ ಗೊತ್ತಿಲ್ಲವೆಂದು ತಿಳಿದಿದ್ದೀರಾ–; ಆಗ್ಗೆ ಅವರು ಅಲ್ಲಿಯೇ ಇದ್ದರು—

**ಕಾವೇರಿ**—(ಪದ್ಮಾವತಿಗೆ) ಯಾಕೆ ಗುರುಗಳೇ ನಿಮ್ಮ ಉಪದೇಶ ಒಂದು ಪಟ್ಟಾದರೆ, ಶಿಷ್ಯ ಮಾಡುವದು ಹತ್ತುಪಟ್ಟಾಯಿತೋ ಇಲ್ಲವೊ?–

**ಪದ್ಮಾವತಿ**—(ಕೋಪದಿಂದ–ಹುಬ್ಬುಗಂಟಿಕ್ಕಿ) ಇದನ್ನೆಲ್ಲ ನಾನು, ಅಮ್ಮಾಸಿಗೆ ತಿಳಿಸಲೇಬೇಕು; ನಿನ್ನೆ ಅತ್ತಕಡೆಗೆ ಹೋಗಲಿಲ್ಲ; ಅದರ ಪರಿಣಾಮವೇ ಇದು! (ಹೋಗುವಳು)

**ಕಾವೇರಿ**—ಅನುಸೂಯಾ ಈ ದಿವಸ ಇವಳಿಗೆ ಚನ್ನಾಗಿ ಮಂಗಳಾರತಿಯಾಯಿತು. ಸಖೂದೇವೀ ನೀನಿಷ್ಟು ಸುಖದಲ್ಲಿ ಬೀಳುವಿಯೆಂದು ನಾವು ತಿಳಿದಿರಲಿಲ್ಲ. ನಿಮ್ಮ ಸತಿಪತಿಗಳ ಪ್ರೇಮವು ಇದೇ ರೀತಿ ಚಿರಕಾಲವಿರಲಿ! ಇಷ್ಟೇ ನಮ್ಮದು ಆ ದೇವರಲ್ಲಿ ಪ್ರಾರ್ಥನೆ!—

**ಸಖೂದೇವಿ**—(ಸ್ವಗತ) ದೇವರಲ್ಲಿ ಅಂದರೆ–ನಮ್ಮನ್ನೇ ಕುರಿತು–ಇವರು ಏನು ಕೇಳತಕ್ಕವರು! ನಮ್ಮ ಪಟ್ಟದರಸಿಯರಾದ ರುಕ್ಮಿಣಿ ಸತ್ಯಭಾಮೆಯರನ್ನು ಬಿಟ್ಟು ನಾವು ಚಿರಕಾಲವೂ ಈ ಮಾಧವರಾಯನ ಹೆಂಡತಿಯಾಗಿ ಇಲ್ಲಿಯೇ ಕಾಲಕಳೆಯಬೇಕೊ! ಚನ್ನಾಗಿದೆ ನಮ್ಮ ಗೆಳತಿಯರ ಅಭಿಲಾಷೆ! (ಪ್ರಕಾಶ) ಅದೋ–ಗೆಳತಿಯರೇ ನೋಡಿದಿರಾ ಸಂಧ್ಯಾಕಾಲವು ನೆಲಕ್ಕಿಳಿಯಿತು. ಏನೀ ಬಣ್ಣದ ಸೊಗಸು–ಮನಸ್ಸನ್ನು ಲಸಿತಗೊಳಿಸುವದು!

ರಾಗ ಮಾಲಕಂಸ, ತಾಳ ಝಂಪಾ

**ದೇವರವಿ ಗಮಿಪನಸ್ತಾಚಲಕೆ। ದೇವಿ ಸಂಧ್ಯಾ ತೋಷಿಪುದಕೆ ಕಾಂತನ ಸುಖಾಗಮವ। ಚಿಂತಿಸುವ ಕಾಂತೆಯರು। ಅಂತರ್ಯದೆ ಮೋದಾಂತರು ಸುಶೀಲೆ ॥೧॥**

---

## ೭ ನೇ ಪ್ರವೇಶ

ಸ್ಥಳಃ— ಮಾಧವನ ಶಯ್ಯಾಗಾರ. ಉತ್ಸಾಹಿತನಾದ ಮಾಧವನು ಪ್ರವೇಶಿಸುವನು

**ಮಾಧವ**—(ಸ್ವಗತ) ಇನ್ನೂ ಇವಳು ಒಳಗೆ ಏನು ಮಾಡುತ್ತಿದ್ದಾಳು? ಸುಮ್ಮನೇ ವೇಳೆ ಹೋಗುತ್ತದೆಂದು— ನಾನು, ರಾತ್ರಿ ಊಟ ಮಾಡುವದಿಲ್ಲವೆಂದು ಹೇಳಿಬಿಟ್ಟೆ; ಫಲಹಾರಕ್ಕೆಂದು ಇಷ್ಟೊಂದು ಪದಾರ್ಥಗಳನ್ನು ಮತ್ತು ಈ ಮಸಾಲೆಯ ಹಾಲನ್ನು ನಾನೇ ಸಿದ್ಧಪಡಿಸಿ, ತಾಯಿಗೆ ಗೊತ್ತಾಗದಂತೆ ತಂದಿರಿಸಿಕೊಂಡೆ! ತಾಯಿ ಎದುರಿಗೆ ಹೇಗೆ ಬರುವದೆಂದು ಇವಳು ಅನುಮಾನಿಸುತ್ತ ನಿಂತಿರಬಹುದು; ಹೀಗಾದರೆ ನಮ್ಮ ಗತಿ ಏನು! ಇಂದಿನ ವರೆಗೆ ನಾನು—ಯಾವ ಸೌಖ್ಯಕ್ಕೆ ಎರವಾಗಿದ್ದೇನೊ, ಅದನ್ನು ಇಂದು ಅನುಭವಿಸಿಯೇ ತೀರಬೇಕೆಂದು ನಾನು ಸಿರ್ಧಾರವನ್ನೇ ಮಾಡಿರುವೆನು. ಆಹಹಾ ಇಂದು ಸಾಯಂಕಾಲ ಆ ಉದ್ಯಾನವನದಲ್ಲಿ ಅವಳು, ನನಗೆ, ಅದೆಷ್ಟು ಮನೋಹರವಾಗಿ ಕಂಡಳು. ಆ ಸೌಂದರ್ಯದ ಸೆಳೆತ ಅದೆಷ್ಟು ಉನ್ಮಾದಕಾರಿಯಾಗಿತ್ತು!

ರಾಗ ಪೀಲು, ತಾಳ ಧೂಮಾಳಿ

**ವನಸೌಭಾಗ್ಯವೋ। ಲಾವಣ್ಯರಾಶಿಯೋ ಶ್ರೀಯೊ ॥ ಪಲ್ಲ ॥ ಈ ಸತಿಯು ದಿವ್ಯ ರೂಪ ಭಾಸಿಪುದೋ ದೇವಿಯು ಸಮವೀಗ। ಸೌಜನ್ಯದ ಸಾಮ್ರಾಜ್ಯವೋ ॥ ೧ ॥**

ಓರ್ವ ಕೀಳು ಕಾಮುಕ ಮನುಷ್ಯನು ಯಾವಳಾದರೂ ಓರ್ವ— ಸುಂದರ ಸ್ತ್ರೀಯನ್ನು ನೆಟ್ಟನೋಟದಿಂದ ನೋಡುತ್ತ ಹೇಗೆ ಬೀದಿಯಲ್ಲಿ ನಿಂತುಬಿಡುವನೋ, ಹಾಗೆಯೇ ನನ್ನ ಅವಸ್ಥೆಯಾಯಿತು. ಆಗ್ಗೆ ಇವಳು ನನ್ನ ಪತ್ನಿಯೋ ಇಲ್ಲ ಮತ್ತಾರೋ ಎನ್ನುವ ಕಕಮುವಾಯಿತು ನನಗೆ! ಅವಳ ಸಂಗಡ ಅವಳ ಗೆಳತಿಯರಿದ್ದರು; ಅವರ ಎಚ್ಚರಿಕೆ ಕೂಡ ನನಗೆ ಇರಲಿಲ್ಲ! ಹಾಗೇ ಬಿರ್ರನೇ ಹೋಗಿ, ಅವಳನ್ನು ಆಲಂಗಿಸಲೇ ಎನ್ನುವ ವಿಚಾರವು ಅರೆಕ್ಷಣ ಹಾದುಹೋಯಿತು; ಮತ್ತು ಈ ದಿನ ಆ ಪ್ರಸಂಗ ತಾನೇ ಬಂದೇ ಬರುವದಲ್ಲವೆಂದು ಮನಸ್ಸನ್ನು ಬಿಗಿಹಿಡಿದೆನು. (ಎದುರಿನ ಕನ್ನಡಿಯಲ್ಲಿ ಸಖೂದೇವಿಯ ಪ್ರತಿಬಿಂಬವನ್ನು ನೋಡುವನು)

**ಸಖೂದೇವಿ**—(ಪ್ರವೇಶಿಸಿ) (ಸ್ವಗತ) ಈವರೆಗೇನೋ ಎಲ್ಲವೂ ಸರಿಯಾಗಿ ಸಾಗಿತು; ಆದರೆ ಇನ್ನು ಮುಂದಿನ ಪ್ರಸಂಗವು ಮಾತ್ರ ಬಿಕ್ಕಟ್ಟಿನದು! ಈತನೋ ತೀರ ಆತುರನಾಗಿದ್ದಾನೆ, ಆದರೆ— ಆದರೆ— ಏನು– ಭಕ್ತಿಗಾಗಿ ಹೊಣೆಹೊತ್ತಮೇಲೆ ಈ ಕಾರ್ಯವನ್ನೂ ನಾವು ಕೊನೆಗಾಣಿಸಲೇಬೇಕು. ಭಕ್ತರಿಗಾಗಿ ಈವರೆಗೆ ನಾನು ಅದೆಷ್ಟೋ ಸಂಕಟಗಳನ್ನು ನಮ್ಮಮೈಮೇಲೆ ತಕ್ಕೊಂಡೆನು; ಅಂಥವುಗಳಲ್ಲಿ ಇದೊಂದು; ಆದರೆ ಈ ಸಂಕಟ ಮಾತ್ರ ಬಹಳ ವಿಲಕ್ಷಣವಾದದ್ದು; ಆದರೆ ಸಂಕಟ–ಸಂಕಟ ಎನ್ನುತ್ತ ಕುಳಿತುಕೊಂಡರೆ, ಕಡೆಹಾಯುವ ದಾರಿ ಹೇಗೆ ಸಿಕ್ಕೀತು? ಸ್ತ್ರೀಯರು ಸ್ತ್ರೀವೇಷವನ್ನು ಧರಿಸಿ ಮಾಡುವ ಅಭಿನಯಕ್ಕಿಂತಲೂ, ಪುರುಷರು ಸ್ತ್ರೀವೇಷವನ್ನು ಧರಿಸಿ ತೋರಿಸುವ ಅಭಿನಯವು ಹೆಚ್ಚು ಕಳೆಕಟ್ಟುವದು; ಅದಕ್ಕೆಂದೇ ಈಗ ನಾವು ಲಜ್ಜೆಯನ್ನು ಸುತ್ತಿ ಒಂದುಕಡೆಗಿರಿಸಬೇಕು. (ಮಾಧವನ ಹತ್ತಿರ ಹೋಗಿ) ತಮ್ಮ ರೂಪವನ್ನೇ ತಾವು ನೋಡಿಕೊಳ್ಳುವದರಲ್ಲಿ, ಅಂಥದೇನು ಚಮತ್ಕಾರವಿರುವದೋ ನಾಕಾಣೆ!

**ಮಾಧವ**—ತಮ್ಮದಲ್ಲ; ತಮ್ಮ ಅಧಿಕಾರದ್ದು–! ಇವತ್ತಿನ ವರೆಗೂ ನೋಡದೇ ಕೇವಲ ಕುರುಡನಂತೆ ದಿನ ಕಳೆದ ನಾನು, ಇಂದು ಆ ತಪ್ಪಿಗಾಗಿ ಸುಮ್ಮನೇ ವ್ಯಥೆಪಡುತ್ತಿದ್ದೇನೆ. ಇಂದಿನ ವರೆಗೆ ನೀನು ನನಗೆ ಈ ಮನೋಹರ ರೂಪವನ್ನು ತೋರಿಸಲಿಲ್ಲ; ನಿನ್ನ ಸದ್ಗುಣಗಳ ಪರಿಚಯುವನ್ನು ಈ ಹತಭಾಗ್ಯನಿಗೆ ಮಾಡಿಕೊಡಲಿಲ್ಲ! ಈ ಸಂಜೆ ಆ ಉದ್ಯಾನವನದಲ್ಲಿ ನಿನ್ನನ್ನು ನೋಡಿದಾಗಿನಿಂದ ನನ್ನ ಮನಸ್ಸು ಲಜ್ಜಾಹೀನವಾಯಿತು. ಆಗಲೇ ಓಡಿ ಬಂದು– ನಿನ್ನನ್ನು ಬಿಗಿದಪ್ಪಿಕೊಳ್ಳಲೇ ಎನ್ನುವ ವಿಚಾರವು ಬಂದೋಡಿತು. ನೀನು ನನ್ನ ಹೃದಯು ದೇವತೆಯು; ನಿನ್ನ ಆರಾಧನೆಗಾಗಿ ಇದೋ ವಸಂತಕಾಲದಲ್ಲಿಯ ಸುಮನೋಹರ ಪುಷ್ಪಗಳ ಹಾರ–ತುರಾಯಿಗಳನ್ನು ತಂದಿರಿಸಿರುವೆನು. ಇದೋ ಈ ತುರಾಯಿಯನ್ನು ನೀನು ಹಸ್ತದಲ್ಲಿ ಧರಿಸು, ಮತ್ತು ಈ ಮಾಲೆಯನ್ನು ಕೊರಳಲ್ಲಿ ಹಾಕಿಕೋ; ಮತ್ತು ಈ ಹೂಗೊಂಚಲನ್ನು ನಿನ್ನ ತುಂಬು ಮುಡಿಗೆ ಮುಡಿದುಕೊ! ಅಲ್ಲ; ನಾನೇ ಮುಡಿಸುತ್ತೇನೆ: ಮತ್ತು ನೈವೇದ್ಯಕ್ಕಾಗಿ

ವಿವಿಧ ಫಲಹಾರವನ್ನು ತಂದಿಟ್ಟಿದ್ದೇನೆ; ಅದನ್ನು ಮೊದಲು ಸೇವಿಸು; ಮತ್ತು ಉಳಿದ ಪ್ರಸಾದವನ್ನು ನನಗೆ ಕೊಡು. ನೀನು ನನ್ನ ಹೃದಯ ದೇವತೆಯು; ನಾನು ನಿನ್ನ ದಾಸನಾಗಲಪೇಕ್ಷಿಸುವ ಭಕ್ತನು.

**ಸಖೂದೇವಿ**— ಇದೇನು- ವಿಪರೀತ- ಹೀಗೆಲ್ಲ ಮಾತಾಡುವದುಂಟೆ?—

ರಾಗ ಪಹಡಿ, ತಾಳ ದೀಪಚಂದ

**ಸನ್ಮಾನಿತಾ ಪ್ರೀಯನಾಥಾತ್ವದೀಯ । ಪಾದಕಿಂಕರ ದಾಸಿನಾನು ॥ ಪಲ್ಲ ॥ ದೀನ ಸತಿಗೆ ಪ್ರೇಮದಾನವ ನೀಡಿ ॥ ಮಾನಿನಿಯ ಮನತೋಷವಗೈದೆ ನಾಥಾ ॥ ೧ ॥**

ನಾನೇ ನಿಮ್ಮ ಚರಣ ದಾಸಿಯು; ನಿಮ್ಮ ಸೇವೆಯನ್ನು ನಾನು ಮಾಡಬೇಕು; ಆದರೆ ನೀವೆ ನನ್ನ ಸೇವೆಯನ್ನು ಮಾಡಲು ಸುರುವು ಮಾಡಿದಿರಿ! ಅಂಥದಕ್ಕೆಲ್ಲ ನಾನು ಈ ದಿವಸ ಅವಕಾಶ ಕೊಡ ತಕ್ಕವಳಲ್ಲ; ನಾನೇ ಈ ದಿವಸ ತಮ್ಮ ಸೇವೆ ಮಾಡತಕ್ಕವಳು! ಮೊದಲು ನಾನು ಮಾಡುವ ಸೇವೆಯನ್ನು ತಾವು ಸ್ವಿಕರಿಸಲೀ ಬೇಕು; ಮತ್ತು ನೀವು- ವಿಶ್ರಮಿಸಿದ ನಂತರ ನಾನು, ಮಲಗು ವೆನು.

**ಮಾಧವ**—ಪ್ರೀಯೇ ನಾನು ನಿಜವಾಗಿ ಹೇಳಲೇ-! ನಾನು ಕತ್ತಲ ಕೋಣೆಗೆ ಬಂದು ನಿನ್ನ ಬಂಧನ ಬಿಡಿಸಿದಾಗಿನಿಂದ ನನ್ನಲ್ಲಿ ವಿಲಕ್ಷಣ ಬದಲಾಗಿ ಹೋಗಿರುವದು. ನನ್ನ ಸೇವೆಯನ್ನು ನೀನು ಮಾಡತಕ್ಕವಳೆಂದು ಹೇಳಿದೆ; ಆದಕ್ಕೆ ನನ್ನ ಮನಸ್ಸು ಎಷ್ಟೂ ಸಮ್ಮತಿಸುವದಿಲ್ಲ. ನೀನು ನನ್ನ ಸ್ವಾಮಿಯು; ನಾನು ನಿನ್ನ ದಾಸನು; ನೀನು ದೇವರು ನಾನು ಭಕ್ತನು!

ರಾಗ ಗಾರಾ, ತಾಳ ದಾದರಾ

**ಆಹಾ ಚೋದ್ಯವಿದೆ । ಮನದೊಳು ಮುದವಾಂತಿಹೆನಯ್ಯಾ ಮಹಿಯ ದೇವತೆಯೋಲ್ ಭಾಸಿಪಳೀಕೆ ॥ ಪಲ್ಲ ॥ ದೇಹಸ್ಪರ್ಶದೆ ಪುಲಕಾಂಕಿತನಾದೆ । ಬಹು ದಿನ ವೀಪರಿಯ ನಾಕಾಣೆ ॥ ೧ ॥**

ನನ್ನ ನಿನ್ನ ಜೀವಗಳು ಒಂದಾಗಬೇಕು; ನಿನ್ನನ್ನು ಈ ಮಂಚದ ಮೇಲೆ ಕುಳ್ಳಿರಿಸಿ ನಿನ್ನ ಮಧುರ ಶಬ್ದಗಳನ್ನು ಕೇಳಬೇಕು;

ಮತ್ತು ಈ ಕಣ್ಣುಗಳಿಂದ ನಿನ್ನ ಸುಂದರ ರೂಪವನ್ನು ಮನದಣಿಯು ನೋಡಬೇಕು; ಹಾಗೆಂದು ಈ ದಿನ ಇದೆಲ್ಲ ಸನ್ನಾಹವನ್ನು ಸಿದ್ಧಪಡಿಸಿಕೊಂಡೆನು. ಆದಕ್ಕೆ ನೀನು ಒಪ್ಪುವಿಯುಷ್ಟೆ; ಬಾ ಹಾಗಾದರೆ ಈ ಮಂಚದ ಮೇಲೆ ವಿಶ್ರಮಿಸು (ಅವಳ ಕೈಹಿಡಿದು ಮಂಚದ ಮೇಲೆ ಕೂಡಿಸುವನು.) ದೇವತೆಯ ಪ್ರತಿಷ್ಠಾಪನೆಯಾಯಿತು! (ಹಾರ ತುರಾಯಿಗಳಿಂದ ಅವಳನ್ನು ಪೂಜಿಸುವನು) ಇನ್ನು ನೈವೇದ್ಯ—(ಅವಳ ಕೈಯಲ್ಲಿ ಹಾಲಿನ ಪಾತ್ರೆಯನ್ನು ಕೊಡುವನು) ದೇವಿಯು ಎಲ್ಲವನ್ನೂ ಸೇವಿಸಕೂಡದು–ಬರಿಯ ಎಂಜಲು ಮಾಡಿ, ಪ್ರಸಾದವನ್ನು ಭಕ್ತನಿಗೆ ಕೊಡಬೇಕು. (ಅವಳು ಎದ್ದು ಆಚೆಗೆ ನಿಲ್ಲವಳು)

**ಸಖೂದೇವಿ**—ಇದೇನು— ಹೀಗೆಲ್ಲ ಹುಚ್ಚುಚ್ಚಾರ ಮಾಡುವದುಂಟೆ?

**ಮಾಧವ**—ತಿಳಿಯಿತು–ತಿಳಿಯಿತು. ಎದ್ದ ಕಾರಣವು– ಈಗ ತಿಳಿಯಿತು. ನಾನು ಕೂಡ ನಿನ್ನ ಸಮೀಪದಲ್ಲಿ ಕೂಡಬೇಕು–; ಹಾಗಲ್ಲವೇ ನಿನ್ನ ಅಭಿಪ್ರಾಯವು. ಆಗಲಿ– ಆಗಲಿ– ಹಾಗೇ ಮಾಡುತ್ತೇನೆ. (ಅವನು ಮಂಚದ ಮೇಲೆ ಕೂಡುವನು) ಇನ್ನು ನೀನು ನಿನ್ನ ಸ್ಥಾನದಲ್ಲಿ ಬಂದು ಕೂಡು.

**ಸಖೂದೇವಿ**—(ಸ್ವ) ಹಿಂದೆ ಅರ್ಜುನನಿಗಾಗಿ ಸುಭದ್ರೆಯಾಗುವ ಪ್ರಸಂಗ ಒಂದುಸಲ ಬಂದಿತ್ತು; ಅಂಥದೇ ಇದೊಂದು ಪ್ರಸಂಗ! ಆದಕ್ಕೆ ನಾನೇಕೆ ಒಲ್ಲೆ ಎನ್ನಲಿ; (ಪ್ರ) ಆದರೆ-ಭಕ್ತನೇ ದೇವರನ್ನು ಕೈಹಿಡಿದು ಕರೆತಂದು ಆಸನದ ಮೇಲೆ ಸ್ಥಾಪಿಸಬೇಕಲ್ಲವೆ?

**ಮಾಧವ**—ಅಷ್ಟೇ ಅಲ್ಲವೇ ಆದಕ್ಕೆ ಭಕ್ತನು ಮೊದಲೇ ಸಿದ್ಧನಿರುವನು. (ಮೊದಲಿನಂತೆ ಅವಳ ಕೈಹಿಡಿದು ಆವಳನ್ನು ಆಸನದ ಮೇಲೆ ಕೂಡಿಸುವನು, ಮತ್ತು ಬಾಳೆಯ ಹಣ್ಣಿನ ತುಂಡನ್ನು ಅವಳ ಬಾಯಲ್ಲಿಡಲು ಯತ್ನಿಸುವನು.) ಈ ಭಕ್ತನು ಕೇವಲ ದೂರದಿಂದ ನೈವೇದ್ಯ ತೋರಿಸಿ, ಸುಮ್ಮನೇ ಕೂಡಲಾರನು ಸ್ವತಹ ತಾನೇ ಬಾಯಿಗೆ ಹಾಕತಕ್ಕವನು.

**ಸಖೂದೇವಿ**—(ಮೆಲುನಗೆ ನಗುವಳು) ತಥಾಸ್ತು— (ಅವಳಿಗೆ ತಿನಿಸುವನು ಉಳಿದರ್ಧ ತಾನು ತಿನ್ನುವನು)

**ಮಾಧವ**—ಇದೋ ಇದು ಮಸಾಲೇ ಹಾಲು ಈ ನೈವೇದ್ಯ ಸ್ವೀಕಾರವೂ

ಮೊದಲಿನಂತೆಯೇ ಆಗಬೇಕು. (ಅರ್ಧ ಕುಡಿಯುವಳು. ಉಳಿದರ್ಧ ವನ್ನು ಮಾಧವನು ಕುಡಿಯುವನು)

**ಸಖೂದೇವಿ**—(ಎದ್ದು ನಿಲ್ಲುವಳು) ಹ–ಇನ್ನು ತಾಂಬೂಲ ಸಮರ್ಪಣೆಯ ಕಾರ್ಯ ನನ್ನದು; ಆ ಕಾರ್ಯದಲ್ಲಿ ನೀವು ಅಡ್ಡ ಬಂದರೆ ನಾನು–ಕೇಳತಕ್ಕವಳಲ್ಲ. (ತಾಂಬೂಲವನ್ನು ಸಿದ್ಧಪಡಿಸುವದರಲ್ಲಿ ತೊಡಗುವಳು)

**ಮಾಧವ**—(ಸ್ವಗತ) ಇದೇನು ಚಮತ್ಕಾರವೋ ನನಗೇ ತಿಳಿಯದಾಗಿದೆ! ಇವಳ ಸಂಬಂಧದಲ್ಲಿ ನನಗೆ ದೇವರಿಗಾಗಿ ಭಕ್ತನಲ್ಲುದಯಿಸುವ ಪವಿತ್ರ ಭಾವನೆಗಳು ಉದಯಿಸಹತ್ತಿರುವವು; ಇವಳು ಆಗಲೇ ತಾನು ಕಡಿದು ನನಗೆ ಕೊಟ್ಟ ಆ ಹಾಲು ಅಮೃತದಂತೆ ಶುದ್ಧವಾಗಿ ತೋರಿತು. ಇವಳು ನನ್ನ ಕೈಯನ್ನು ಸ್ಪರ್ಶಿಸಿದಕೂಡಲೇ, ನನ್ನ ಅಂಗಾಂಗಗಳೆಲ್ಲವೂ ರೋಮಾಂಚ ಪ್ರಪಂಚವಾಯಿತು. ಇದೆಲ್ಲ ಅದ್ಭುತ ಚಮತ್ಕಾರವೆಂದೇ ಅನ್ನಬೇಕು—! (ಸಖೂದೇವಿಯನ್ನು ತಾದಾತ್ಮ್ಯದಿಂದ ನೋಡುವನು)

**ಸಖೂದೇವಿ**—(ತಾಂಬೂಲವನ್ನು ಅವನ ಕೈಯಲ್ಲಿರಿಸಿ—) ಇದೋ ಸ್ವೀಕರಿಸಬೇಕು.

ರಾಗ ಖಮಾಜ, ತಾಳ ದಾದರಾ

**ದಿವ್ಯತಾಂಬುಲವ ಸ್ವೀಕರಿಪುದು ನೀ ರಮಣಾ ॥ ಪಲ್ಲ ॥ ಪ್ರಣಯ ವಿಲಾಸದೆ ।**
**ಸನ್ಮೋದವನೆ ತಾ ಕೊಡುವ । ಸನ್ನುತಾ ಕಾಂತನೆ । ಮನ್ನಿಸು ಸತಿಯ ರಮಣಾ ॥೧॥**

# ೩ನೇ ಅಂಕ

## ೧ನೇ ಪ್ರವೇಶ

(ಸ್ಥಳ:— ಪಂಢರಪುರ. ಚಂದ್ರಭಾಗೆಯ ತೀರ. ವಸಂತೋತ್ಸವಕ್ಕಾಗಿ ಭಕ್ತರ ಮೇಳ ಸೇರಿದೆ. ಆನಂದ ಸುತ್ತೂ ಕಾಣುತ್ತದೆ. ಸಂತೋಷಭರಿತೆಯಾದ ಸಖೂ ಪ್ರವೇಶಿಸುವಳು.)

**ಸಖೂದೇವಿ**—(ಪ್ರವೇಶಿಸುವಳು.)

ರಾಗ ಭೈರವಿ, ತಾಳ ದೀಪಚಂದಿ

**ನಲಿನಲಿದೆ ಭಕ್ತ ಕೃಪಾಳಾ । ಪಾಂಡುರಂಗಾ ಪಾಡಿ ನಿನ್ನ ॥ ಪಲ್ಲ ॥ ಭಜಕಜನಾಳಿಯು। ಭಜಿಸುವ ಭಜನಾನಂದ । ಮೂಜಗದೆ ಕಾಣೆನು ನಾ ॥ ೧ ॥ ಪಂಢರಪುರದ । ದಿವ್ಯ ಮಹಾ ವೈಭವ ಭೂ । ಮಂಡಲದೋಳ್ ಚೋದ್ಯವು ಹಾ ॥ ೨ ॥**

ಅಂತೂ ನಾನು– ಪಂಢರಪುರಕ್ಕೆ ಸುಖವಾಗಿ ತಲುಪಿದೆ. ಗಿರಿಜಾಬಾಯಿಯು ನನಗೆ ಜೊತೆಮಾಡಿದ ಆಳು– ಖಂಡಿತವಾಗ ಬುದ್ಧಿವಂತನು; ವಿಶ್ವಾಸಿಕನು. ಆವನು ಮಾರ್ಗದಲ್ಲಿ ನನಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಂಡನು; ನನ್ನ ಹಿಂದೆಯೇ ನನ್ನನ್ನು ಮರಳಿ ಮನೆಗೆ ಎಳೆದುಕೊಂಡುಹೋಗಲು ಯಾರು ಬರುತ್ತಾರೋ ಎನ್ನುವ ಅಂಜಿಕೆಯು ನನಗಿದ್ದೇ ಇತ್ತು; ಆದರೆ ಅವನು ಕರೆದುಕೊಂಡು ಬಂದ ದಾರಿಯನ್ನು ಯಾರೂ ನೋಡಿರಲಾರರು; ಮತ್ತು ಅಂಥವರು ಯಾರಾದರೂ ಬಂದರೆ ತನ್ನ ಮುಂದೆ ಯಾರ ಆಟವೂ ಸಾಗುವದಿಲ್ಲವೆಂದು ಮೇಲಿಂದಮೇಲೆ ಧೈರ್ಯ ಹೇಳುತ್ತಿದ್ದನು. ಹೋಗಲಿ ಇನ್ನೇಕೆ ಆ ಯೋಚನೆಗಳು! ಏನೀ ಪಂಢರಪುರದ ಸೌಭಾಗ್ಯವು! ಮನುಷ್ಯನ ಉದ್ಧಾರಕ್ಕಾಗಿ ಪರಮಾತ್ಮನು ಕಾದುಕೊಂಡು ನಿಂತಿರುವ ತಾಣವಿದು. ಎಲ್ಲಿ ನೋಡಿದಲ್ಲಿ ಭಗವಂತನ ನಾಮ ಸಂಕೀರ್ತನದಲ್ಲಿ ತಮ್ಮನ್ನೇ ತಾವು, ಮರೆತ ಭಕ್ತವೃಂದದ ಮೇಳವು! ಇವರಿಗೆ ಸಂಸಾರದ ನಿತ್ಯದ ಗೋಳು ತಾಕುವದಿಲ್ಲ. ವಿಠ್ಠಲನ ನಾಮ ಸಂಕೀರ್ತನೆಯನ್ನುಳಿದು ಬೇರೆ ವ್ಯವಸಾಯುವೇ ಇವರಿಗಿಲ್ಲ.

ರಾಗ ಪಹಡಿ, ತಾಳ ಧೂಮಾಳಿ

**ಏನು ಧನ್ಯವೇ ಪಂಢರಪುರವೆ । ಜ್ಞಾನಿಗಳಾಶ್ರಿತ ಸ್ಥಾನದ ಮಹಿಮೆ ॥ ಏನು ಪೇಳಲಿ ನಾನೀ ಮುಖದೆ ॥ ತ್ರಿಭುವನದಾ ಆನಂದದ ಕಣಿಯೇನಿದುವೇ ॥ ವೈಭವದೊಳು ವೈಕುಂಠಕೆ ಸಮತೋರುವದೆ । ಶೋಭೆಯ ನೋಡಿ । ತೋಷಿತಳಾದೆ ॥ ೧ ॥**

ಇನ್ನು ಮುಖ್ಯ ಕೆಲಸವೆಂದರೆ,- ನನ್ನ ಜೊತೆಯಾಗಿ, ಇಲ್ಲಿಗೆ ನನ್ನನ್ನು ತಂದು ತಲುಪಿಸಿದ ಮನುಷ್ಯನು-ಕೊನೆಗೊಮ್ಮೆ ನನ್ನನ್ನು ದೇವರ ಚರಣಗಳಮೇಲೆ ಚೆಲ್ಲಿದನೆಂದರೆ ತೀರಿತು; ಆಗ್ಗೆ ನನ್ನ ಜನ್ಮ ಸಫಲವಾದಂತೆ; ಆದರೆ ನನ್ನನ್ನು ಮಾರ್ಗದಲ್ಲಿಯೇ ಬಿಟ್ಟು ಎಲ್ಲಿ ಹೋದನು! ಅವನದೂ ನನ್ನದೂ ಹೇಗೆ ತಪ್ಪಿಗಂಟಾಯಿತೋ ತಿಳಿಯದಾಗಿದೆ. ನನಗೋ ದೇವರ ಚರಣಗಳಮೇಲೆ ಈ ಶಿರಸ್ಸನ್ನಿಡಲು ಜೀವ ಆತುರವಾಗಿದೆ. ಜನಗಳ ದಟ್ಟಣೆಯು ಬಹಳವಿದೆಯೆಂದು ಹೇಳುತ್ತಾರೆ. ಅಂಥದರಲ್ಲಿ ನನ್ನನ್ನು ದೇವರ ಸನ್ನಿಧಾನಕ್ಕೆ ಯಾರು ತಲುಪಿಸುವರು! ಎಲಾ ಹತಭಾಗೀ ಜೀವವೇ ಅಷ್ಟೇಕೆ ಅಧಿರವಾಗುವೆ! ಯಾರು ನಿನ್ನನ್ನು ಅಲ್ಲಿಗೆ ಬರುವಂತೆ ಮಾಡಿದರೋ, ಅವರೇ ನಿನ್ನನ್ನು ದೇವರ ಸನ್ನಿಧಿಗೆ ತಲುಪಿಸುವಂತೆ ಮಾಡುವರು. ನನಗಸಾಧ್ಯವಾದ ಕಾರ್ಯವನ್ನು ಸಾಧಿಸಿಕೊಟ್ಟ ಅವನು ಇನ್ನುಮುಂದೆ ನನ್ನನ್ನು ಹಾಗೇ ಬಿಡುವನೆ ?— ಸಕಲ ತಾಪತ್ರಯಗಳನ್ನು ಪರಿಹರಿಸುವಂಥ ಶ್ರೇಷ್ಠನಾದ ವೈದ್ಯನವನು! ಅವನ ಧ್ಯಾನವನ್ನುಳಿದು ನನಗೆ ಬೇರೆಯ ವಿಚಾರಗಳೇ ಬರಕೂಡದು. ಈಗ ಮೊದಲು ಚಂದ್ರಭಾಗೆಯ ಸ್ನಾನ ತೀರಿಸಿಕೊಳ್ಳೋಣ. ಆಮೇಲೆ ವೈಕುಂಠರಾಯನ ದರ್ಶನಕ್ಕಾಗಿ ದಾರಿ ಕಾಯೋಣ. ಆ ಮೊದಲು ಬೇರೆಯ ವಿಚಾರವೇ ಬೇಡ.

(ಗಿರಿಜಾಬಾಯಿ ವಿಶ್ವನಾಥಭಟ್ಟರು ಬರುತ್ತಾರೆ)

**ವಿಶ್ವನಾಥಭಟ್ಟ**—(ಆಶ್ಚರ್ಯದಿಂದ) ಎಲಾ ಇದೇನು- ಈ ಹುಡುಗಿಯು ನಮ್ಮ ಹಿಂದೆಯೇ ಬಂದಿದ್ದಾಳಲ್ಲ!—

**ಗಿರಿಜಾಬಾಯಿ**— ಖಂಡಿತವಾಗಿಯೂ ಈ ಹುಡಿಗೆಯೂ ಹೆಚ್ಚಿನದೆಂದೇ ಅನ್ನ ಬೇಕು.

**ವಿಶ್ವನಾಥಭಟ್ಟ**— ಹೆಚ್ಚಿನದಲ್ಲ- ವುತ್ತೆನಲ್ಲ- ಮೀರಿದ ಹಟಮಾರಿ—! ಅತ್ತೆ-ಗಂಡ ಎಷ್ಟು ದುರ್ದೆಸೆ ಮಾಡಿದರೂ- ನೋಡಿದೆಯಾ— ಕೊನೆಗೆ ಅವರ ಕಣ್ಣು ತಪ್ಪಿಸಿ ಹೇಗೆ ಬಂದಿದ್ದಾಳೆ! ಹಾಗೆಂದೇ ಅವಳ ಅತ್ತೆಯು ಅವಳನ್ನು ಅಷ್ಟು ಪೀಡಿಸುತ್ತಾಳೆ; ಆದರಲ್ಲಿ ಆವಳದೇನು ದೋಷವು! ನೋಡಿದರೆ ತಾನಿನ್ನೂ ಚಿಕ್ಕವಳು; ಆದರೆ ತನಗೇಕೆಬೇಕು ಅಷ್ಟು ಹಟ!

**ಗಿರಿಜಾಬಾಯಿ**—(ಸಖೂದೇವಿಯ ಸಮೀಪಕ್ಕೆ ಹೋಗಿ) ಸಖೂ- ಅಂತೂ ನೀನು- ನಿರ್ಧಾರಮಾಡಿದಂತೆ ಪಂಢರಪುರಕ್ಕೆ ಬಂದುಬಿಟ್ಟೆ! ಭಲೆ- ಭಲೆ- ನಿಜವಾದ ಭಕ್ತಳು ನೀನು; ಆದರೆ- ಆಂದು ನಿಮ್ಮ ಅತ್ತೆಯು ನಿನ್ನನ್ನು ಮನೆಗೆ ಕರೆದೊಯ್ದಮೇಲೆ ನಿನ್ನನ್ನು-ಬಹಳ ಪೀಡಿಸಿರಬೇಕು. ಅಂಥದರಲ್ಲಿ ನೀನು ·ಹೇಗೆ ಪಾರಾಗಿ ಬಂದೆ ಯಮ್ಮಾ?—

**ಸಖೂದೇವಿ**— ಹೇಗೆಂದರೆ— ಗಿರಿಜಾಬಾಯಿಯವರೇ ಅದನ್ನೇನು ಕೇಳುವಿರಿ ನೀವು? (ನಾಲಿಗೆ ಕಚ್ಚಿ) (ಸ್ವಗತ) ಅಮ್ಮಯ್ಯಾ- ಒಳ್ಳೇ ಸೆನಪಾಯಿತು. ನನ್ನನ್ನು ಬಂಧನದಿಂದ ಬಿಡಿಸಿದಾಗ ಗಿರಿಜಾಬಾಯಿಯವರು ಹೇಳಿದ ಮಾತನ್ನು ಮರೆತೇಬಿಟ್ಟಿದ್ದೆನು. ಏನೋ ಹುಚ್ಚಿಯಂತೆ ಹೇಳಹೋಗಿದ್ದೆನು! (ಪ್ರಕಾಶ) ಗಿರಿಜಾಬಾಯಿಯವರೇ— ಹೇಗಂದರೆ- ಏನು ಹೇಳಲಿ—? ದೇವರ ಮನಸ್ಸಿಗೆ ಬಂದರೆ ಯಾವುದು ಅಸಾಧ್ಯ?—

**ಗಿರಿಜಾಬಾಯಿ**—ಆದಿರಲಿ- ನೀನು ಯಾವಾಗ್ಗೆ ಬಂದೆ?

**ಸಖೂದೇವಿ**—ಇದೋ ಇದೇ ಈಗ ಬಂದೆ!—

**ವಿಶ್ವನಾಥಭಟ್ಟ**—ಏನೇ ನಾನು ನಿನಗೆ ಆಗಲೇ ಹೇಳಲಿಲ್ಲವೇ- ಈ ಹುಡುಗಿಯ ಕೂಡ ಮಾತಾಡಬೇಡವೆಂದು! ನಡೆ- ನಡೆ- ಬೇಗ ಹೋಗೋಣ!

**ಗಿರಿಜಾಬಾಯಿ**—ಸಖೂ- ನೀನು- ಯಾರ ಜೊತೆಗೆ ಬಂದೆ?—

**ಸಖೂದೇವಿ**—ನನ್ನ ಪರಿಚಯದ ಯಾತ್ರಿಕಾರನೊಬ್ಬನು ಬರುತ್ತಿದ್ದನು. ಅವನು ನನ್ನನ್ನು ಸಮೀಪದ ಮಾರ್ಗದಿಂದ ಇಲ್ಲಿಗೆ ಕರೆತಂದನು;

ಆದರೆ ಅಷ್ಟರಲ್ಲಿಯೇ ಅವನದೂ ನನ್ನದೂ ತಪ್ಪುಗಂಟಾಯಿತು. ಅವನು ಎಲ್ಲಿ ತಪ್ಪಿಸಿಕೊಂಡನೋ ಏನೊ! ನಿಮ್ಮ ಭೆಟ್ಟಿಯಾಯಿತು. ಬಹಳ ಅನುಕೂಲವಾಯಿತು. ನನಗೆ ಚಂದ್ರಭಾಗೆಯ ಸ್ನಾನವನ್ನೂ ಮತ್ತು ಪಾಂಡುರಂಗನ ದರ್ಶನವನ್ನೂ ನೀವೇ ಮಾಡಿಸಬೇಕು.

**ವಿಶ್ವನಾಥಭಟ್ಟ**—ಏನೇ ನಾನು– ಸಾರಿ ಸಾರಿ ಹೇಳುತ್ತೇನೆ– ನಿನಗೆ, ಈ ಹುಡಿಗೆಯ ಸಹವಾಸಕ್ಕೆ ನೀನು ಹೋಗಬೇಡ. ಇವಳು ಮನೆಯಲ್ಲಿ ತನ್ನ ಗಂಡ–ಅತ್ತೆಗೆ ತಿಳಿಸದೇ ಬಂದಿರುವಳು; ಪುನಃ ಅವಳನ್ನು ತಿರುಗಿ ಮನೆಗೆ ಕರೆದುಕೊಂಡು ಹೋಗಲು ಯಾರಾದರೂ ಬಂದೇತೀರುವರು. ನಮ್ಮ ಜೊತೆಗೆ ಇವಳು ಇರುವದನ್ನು ನೋಡಿದರಂತೂ ಅವರು ಸರಕಾರಕ್ಕೆ ತಿಳಿಸದೇ ಇರುವದಿಲ್ಲ; ಆಗ ನಮಗೆ ಇಲ್ಲದ ತೊಂದರೆಗಳು ತಲೆದೋರುವವು. (ಸಖೂದೇವಿಗೆ) ಸಖೂ ನೀನು ಇಲ್ಲಿಯ ತನಕ ಒಬ್ಬಳೇ ಹೇಗೆ ಬಂದೆಯೋ ಹಾಗೇ ಚಂದ್ರಭಾಗೆಯ ಸ್ನಾನವನ್ನು ಮಾಡು; ದೇವರ ದರ್ಶನವನ್ನೂ ತೆಗೆದುಕೊ; ನಿನ್ನ ಮನಸ್ಸಿಗೆ ಬಂದಹಾಗೆ ಮಾಡು. ನಮಗೆ ನಿನ್ನ ಸಂಬಂಧವೇ ಬೇಡ. ನಾವು ಬಡಯಾತ್ರಿಕರು. ನಮಗೇತಕ್ಕೆ ಈ ಎಲ್ಲ ತೊಂದರೆಗಳು! (ಗಿರಿಜಾಬಾಯಿಗೆ) ಏನೇ ನಾನು ಮತ್ತೊಂದು ಸಲ ನಿಷ್ಠುರವಾಗಿ ಹೇಳುತ್ತೇನೆ. ನಮಗೆ ಅವಳ ಸಹವಾಸ ಬೇಡ. ನಡೆ ಮೊದಲು ಇಲ್ಲಿಂದ!—

(ಉಪಾಯಗಾಣದೇ ಗಿರಿಜಾಬಾಯಿಯು ಹೋಗುವಳು)

**ಸಖೂದೇವಿ**—(ಹತಾಶಳಾಗಿ) ದುರ್ದೈವವು ಎಷ್ಟು ಬಲವತ್ತರವಾದದ್ದು ಗಿರಿಜಾಬಾಯಿ ಮತ್ತು ವಿಶ್ವನಾಥಭಟ್ಟರು ಅದೆಷ್ಟು ಸಾತ್ವಿಕರು; ಆದರೆ ಅವರು ನನ್ನನ್ನು ತಮ್ಮ ಜೊತೆಗೆ ಕರೆದುಕೊಂಡು ಹೋಗಲಿಲ್ಲ. ಕರೆದುಕೊಂಡು ಹೋಗಬೇಕೆಂದು ಗಿರಿಜಾಬಾಯಿಯು ಅದೆಷ್ಟು ಹಾತೊರೆದಳು! ಹೋಗಲಿ ಇನ್ನು ಮುಂದಿನವಿಚಾರ ಏನುಮಾಡಬೇಕು. ಇನ್ನು ಆ ಬಗ್ಗೆ ಅಷ್ಟು ವಿಚಾರ ಮಾಡಿ ಉಪಯೋಗವಿಲ್ಲ. ಸಾವಿರ ಜನ ಚಂದ್ರಭಾಗೆಯ ಸ್ನಾನಕ್ಕೆ ಹೋಗು

ತ್ತಾರೆ; ಅವರ ಜೊತೆಗೆ ನಾನೂ ಹೋಗಬೇಕು; ಸ್ನಾನ ತೀರಿಸಿ ಕೊಳ್ಳಬೇಕು!(ಹೋಗುವಳು)

---

## ೨ನೇ ಪ್ರವೇಶ

ಸ್ಥಳ:— ಪಾಡುರಂಗನ ದೇವಸ್ಥಾನದ ಅಂಗಣ. ತುಂಬ ಜನ ಸೇರಿದೆ. ಸಖೂದೇವಿ ಮತ್ತು ಗರುಡ ಪ್ರವೇಶಿಸುತ್ತಾರೆ.

**ಸಖೂದೇವಿ**—ನಾನಂದುಕೊಂಡೆ ನೀನು ಎಲ್ಲಿ ತಪ್ಪಿಸಿಕೊಂಡೆಯೋ ಎಂದು! ಸ್ವಲ್ಪ ಭಯವೂ ಉಂಟಾಯಿತು; ಯಾಕಂದರೆ ನನಗೋ ಇಲ್ಲಿಯ ಯಾವ ಸಂಗತಿಯೂ ತಿಳಿಯಲಾರವು!

**ಗರುಡ**—ತಾಯೀ ಅಲ್ಲಿಯೇ ವಿಶ್ರಮಿಸಿಕೊಂಡಿದ್ದೆ. ನಡೆದು-ನಡೆದು ಕಾಲುಗಳು ಸೋತುಹೋಗಿದ್ದವು. ನೆಲ ಕಂಡೆನೇ ಎಂದು ಅನಿಸಿತ್ತು ತಾಯೀ-ನಿಮಗೆ ಬೇರೆ ವಿಚಾರವೇ ಇಲ್ಲ. ಯಾವಾಗ್ಗೆ ಪಂಥರಪುರ ಬಂದಿತೋ- ಎನ್ನುವ ಒಂದೇ ಒಂದು ಚಿಂತೆ ನಿಮಗೆ—! ಅಂತೂ ಪಂಥರಪುರಕ್ಕಂತೂ ಬಂದು ತಲುಪಿದೆವು. ಈ ಗಲಾಟೆಯಲ್ಲಿ ದೇವರ ದರ್ಶನ ಕಷ್ಟ—; ಸ್ನಾನಕ್ಕೆ ಹೋಗುವದೂ ಕಷ್ಟ; ದೇವರ ದರ್ಶನಕ್ಕಂತೂ ಎರಡೆರಡು ಮೂರು ಮೂರು ದಿನ ದಾರಿ ಕಾಯಬೇಕಾಗುತ್ತದೆ; ಆದರೆ ನಾನು ನಿಮ್ಮನ್ನು ಒಳ್ಳೇ ಹಂಚಿಕೆಯಿಂದ ನಮ್ಮ ಧಣಿಯರ ಪಾದಸನ್ನಿಧಿಗೆ-ಕರೆದುಕೊಂಡು ಹೋಗುವೆನು. (ನಾಲಿಗೆ ಕಚ್ಚಿ) (ಸ್ವಗತ) ಹೀಗೇ ಏನಾದರೊಂದು ಮಾತು ಆಪದ್ಧವಾಗುತ್ತದೆ. ಅವಳಿಗೆ ತಿಳಿಯುವದಿಲ್ಲ ಪರಿಣಾಮ ಚನ್ನಾಗಿದೆ! (ಪ್ರಕಾಶ) ನಿಮ್ಮನ್ನು ವಿಠ್ಠಲನ ಪಾದಸನ್ನಿಧಿಗೆ ಕರೆದು ಕೊಂಡು ಹೋಗಿ ಮುಟ್ಟಿಸುತ್ತೇನೆ. ಹಾಗೇ ಯುಕ್ತಿಯಿಂದ ನನ್ನ ಹಿಂದೆಯೇ ಬನ್ನಿರಿ. ಬಾಯಿಂದ ದೇವರ ನಾಮಸ್ಮರಣೆ ಮಾಡುತ್ತ ದೇವಾಲಯವನ್ನು ಹೊಕ್ಕರೆ, ನಿರಾತಂಕವಾಗಿ ನಮಗೆ— ದೇವರ ದರ್ಶನವು ದೊತೀತು. (ತೆರೆ ಬೀಳುವದು ಹೋಗುವರು)

---

# ೩ನೇ ಪ್ರವೇಶ

(ಸ್ಥಳ:— ಪಾಂಡುರಂಗ ದೇವಾಲಯ. ದೇವರ ಮೂರ್ತಿಯ ಸಮೀಪದಲ್ಲಿ ಭಕ್ತ ವೃಂದವು ಭಜನೆಯಲ್ಲಿ ತನ್ಮಯವಾಗಿದೆ. ಸಖೂದೇವಿಯು ದೇವರಿಗೆ ನಮಸ್ಕಾರ ಮಾಡು ವಳು.)

**ಸಖೂದೇವಿ**—ದೇವಾ ಪಂಢರಿನಾಥಾ ನಾನು ಈ ಪುಣ್ಯಭೂಮಿಗೆ ಕಾಲಿಟ್ಟಕೂಡಲೆ ನನ್ನ ದುಃಖದ ಅರಿವು ಮರೆಯಾಯಿತು. ನಿನ್ನ ಚರಣ ಸನ್ನಿಧಾನಕ್ಕೆ. ನನ್ನನ್ನು ಬರುವಂತೆ ಮಾಡಿ ನನ್ನ ಜನ್ಮ ವನ್ನು ಸಾರ್ಥಕಗೊಳಿಸಿದೆ. ಇನ್ನು ನನ್ನ ಕೊನೆಯ ಬೇಡಿಕೆ— ಇಷ್ಟೆ—

ರಾಗ ಖಮಾಜ, ತಾಳ ಧುಮಾಳಿ

**ಶ್ರೀಕಾಂತಾ ಪಂಢರಿನಾಥಾ । ಯಾಕಿಂತು ಯೋಚಿಪೆ । ಹೇ ಕರುಣಾಸಿಂಧು ದೇವಾ। ಸಾಕಿನ್ನು ಜನ್ಮವು ॥ ೧ ॥ ಎನ್ನಯ ಜನನೀಜನಕರು ನಿನ್ನ ಪಾದವಪೊಂದಿಹರೋ ಮನ್ನಿಸು ವಿಠ್ಠಲರಾಯಾ ಸದಯಾ ದೀನ ಜನಪ್ರಿಯಾ ನೀನುದ್ಧರಿಸೆನ್ನನು ಬೇಗ ರಕುಮಾಯಿವಲ್ಲಭಾ ॥ ೨ ॥ ಅನಾಥ ಅಬಲೆಗೆ ನೀನೇ ಗತಿಯೋ । ಜ್ಞಾನನಿಧೆ ಕಾಯೋ । ನಿನ್ನಯ ಪಾದಸನ್ನಿಧಿಯೊಳು ಎನ್ನ ಸೇರಿಸು ಮಾಧವನೆ । ನೀನೆನ್ನ ನುಪೇಕ್ಷಿಪರೇನೋ । ಮುನಿಜನ ಸಂಪೂಜಿತಾ ॥ ೩ ॥**

**ಸಖೂದೇವಿ**—ಪಾಂಡುರಂಗಾ— ನನಗೆ ಈ ಜಗತ್ತಿನಲ್ಲಿ ನಿನ್ನನ್ನುಳಿದು ಬೇರೆ ಗತಿ ಇಲ್ಲ. ನೀನು ನನ್ನ ತಾಯಿ; ನೀನೇ ನನ್ನ ತಂದೆ; ನನ್ನ ತಾಯಿಯು ನಿನ್ನ ಚರಣಗಳಲ್ಲಿಯೇ ಲೀನಳಾದಳು; (ಮೇಲೆನೋಡಿ) ಅದೋ ಅವಳು ನನಗೆ ಅಲ್ಲಿ ಕಾಣುತ್ತಿರುವಳು; ಅವಳು ನನ್ನನ್ನು ಕರೆಯುತ್ತಿರುವಳು; ದೇವಾ ನನ್ನನ್ನೂ ಅವಳೆಡೆಗೆ ಕರೆದೊಯ್ಯು, ಇಲ್ಲ ನಿನ್ನ ಸನ್ನಿಧಾನಕ್ಕಾದರೂ ಬರುವಂತೆ ಮಾಡು. ಹಾಗೆ ನೀನು ಮಾಡುವತನಕ ನಾನು ನಿನ್ನ ಚರಣಗಳನ್ನು ಬಿಡುವುದೇ ಇಲ್ಲ.

(ಸಖೂದೇವಿಯು ದೇವರ ಪಾದಗಳ ಮೇಲೆ ತಲೆ ಇಟ್ಟು ಪ್ರಾಣಬಿಡುವಳು.)

**೧ನೇ ಭಕ್ತ**—(ಕೂಗಿ) ಏನಮ್ಮಾ ವತ್ಸಲಾಬಾಯಿ—ದೇವರ ಪಾದಗಳನ್ನು ಹಾಗೇ ಗಟ್ಟಿಯಾಗಿ ಹಿಡಿದುಕೊಂಡು ಅದೆಷ್ಟು ಹೊತ್ತು ಕುಳಿತು ಕೊಳ್ಳುವೀ—? ವಿಠ್ಠಲನು ನಿನಗೊಬ್ಬಳಿಗಾಗಿಯೇ ಇರುವನೆಂದು ನೀನು ಭಾವಿಸಿರುವೆಯೋ ಏನು?

**೨ನೇ ಭಕ್ತ**—ಎಲವೊ ಅವಳು ಅಲ್ಲಿ ಏನು ಮಾಡುತ್ತಿರುವಳು ?

**೩ನೇ ಭಕ್ತ**—ಏನವ್ವಾ ಏ ತಾಯೀ ಏಳು ಏಳು ಬೇಗನೇ ಏಳು. ಕಿವಿಗಳು ಕೇಳಿಸುವದಿಲ್ಲವೇನವ್ವಾ–! ಏs ತಾಯೀ ಲಂಕಿಣೀಬಾಯೀ ಸಾವಿರಾರು ಯಾತ್ರಿಕರು ದೇವರ ದರ್ಶನಕ್ಕಾಗಿ ದಾರಿಕಾಯುತ್ತಿರುವರು. ಏಳವ್ವಾ ಏಳವ್ವಾ–ಏಳು ತಾಯೀ–(ದಿಟ್ಟಿಸಿ ನೋಡಿ) ಇದೇನಾಶ್ಚರ್ಯ ಇವಳು ಮುಖವನ್ನೆ ಮೇಲೆತ್ತಲೊಲ್ಲಳಲ್ಲ! ಇದೇನು ಚಮತ್ಕಾರವಿದ್ದೀತು.

**೧ನೇ ಭಕ್ತ**—ಆಚೆಗೆ ದಬ್ಬಿರೋ ಅವಳನ್ನು ಎಷ್ಟು ತಾನೇ ದಾರೀನೋಡುವದು ? ಬೇಡಪ್ಪಾ ಮೈಮುಟ್ಟುವಮಾತು ಬೇಡ! ಆ ದಫೇದಾರನಿಗೆ ಹೇಳಿರಿ. ಅವನೇ ಇವಳನ್ನು ಸರಿಸಲಿ! (ಗಿರಿಜಾಬಾಯಿ ಮುಂದಾಗಿ ಸಖೂದೇವಿಯನ್ನು ನೋಡುವಳು.)

**ಗಿರಿಜಾಬಾಯಿ**—(ಕನಿಕರದಿಂದ) ಅಯ್ಯೋ ದೈವವೇ– ಹುಡುಗಿಯು, ದೇವರ ಪಾದಗಳಮೇಲೆ ತನ್ನ ಪ್ರಾಣವನ್ನೇ ಬಿಟ್ಟುಬಿಟ್ಟಿರುವಳು.

**ವಿಶ್ವನಾಥಭಟ್ಟ**—ಏನು ದೇವರ ಪಾದಗಳ ಮೇಲೆ ಪ್ರಾಣ ಬಿಟ್ಟಳೇ! ದೇವರ ಪಾದಗಳಮೇಲೆ ಪ್ರಾಣ ಬಿಡುವದೆಂದರೆ, ಸಾಮಾನ್ಯ ಮಾತೇ ಅದು ! ಖಂಡಿತವಾಗಿಯೂ ಸಖೂದೇವಿಯು ಭಾಗ್ಯಶಾಲಿನಿಯು. (ಎಲ್ಲ ಭಕ್ತವೃಂದವೂ ಪುಂಡರೀಕ ವರದ ಹರಿ ವಿಠ್ಠಲ ಎಂದು ಜಯಘೋಷ ಮಾಡುವರು.) (ತೆರೆ ಬೀಳುವದು)

---

## ೪ನೇ ಪ್ರವೇಶ

(ಸ್ಥಳ:— ಚಂದ್ರಭಾಗಾನದಿಗೆ ಹೋಗುವ ದಾರಿ. ಗಿರಿಜಾಬಾಯಿಯು ಬರುವಳು)

**ಗಿರಿಜಾಬಾಯಿ**—(ಸ್ವಗತ) ಸಖೂದೇವಿಯ ಪುಣ್ಯ ಎಷ್ಟು ಮಹತ್ತರವಾದದ್ದು; ಆದರೆ ಅಂಥ ಪುಣ್ಯದೇಹದ ಅಗ್ನಿಸಂಸ್ಕಾರಕ್ಕೆ ನಾಲ್ಕು ಜನ ಬ್ರಾಹ್ಮಣರು ಒದಗಬಾರದೆಂದರೆ, ಎಷ್ಟು ವಿಪರೀತಕಾಲವಾಯಿತಲ್ಲ! ದೇವರಿಗೆ ಮೈಲಿಗೆಯಾಯಿತೆಂದು, ಪೂಜಾರಿಗಳು ವಾದಹೂಡಿ. ಆ ಹುಡುಗಿಯನ್ನು ವೃಥಾ ದೂಷಿಸುತ್ತಿರುವರು. ಇಂಥ ಧಡ್ಡರಿಗೆ ಏನನ್ನಬೇಕು! ಅವಳ ವೂರ ಜನರೇ

ಇಲ್ಲಿಗೆ ಬಂದಿದ್ದಾರೆಂದು ಆಗಲೇ ಯಾರೋ ಹೇಳಿದರು. ಅವರನ್ನು ನಾನು ಭೆಟ್ಟಿಯಾಗುವ ದಾರಿ ಯಾವುದು? ಪ್ರೇತ ಸಂಸ್ಕಾರವು ಬೇಗನೇ ನೆರವೇರಬೇಕು; ಇಲ್ಲವಾದರೆ ಸರಕಾರದವರು ಕೈಹಾಕುವರು; ಅಂಥ ಪುಣ್ಯದೇಹಕ್ಕೆ ಯಾರ ಯಾರಿಂದಲೋ ಅಗ್ನಿ ಸಂಸ್ಕಾರವಾದರೆ ನಾವಿದ್ದು ಏನು ಫಲ. ನಾಲ್ಕು ಜನ ಬ್ರಾಹ್ಮಣರನ್ನು ಕೂಡಿಸಿಕೂಂಡು ಬರುತ್ತೇನೆಂದು ಆಗಲೇ ಇವರು ಹೋದರು ಇನ್ನುವರೆಗೂ ಬರಲಿಲ್ಲ. ಇವರೇ ಮುಂದಾಗಿ ಎಲ್ಲ ಮಾಡಬೇಕು.—

**ವಿಶ್ವನಾಥಭಟ್ಟ**—(ಪ್ರವೇಶಿಸುವನು) ಮೂರು ಜನ ಕರ್ಹಾಡದ ಬ್ರಾಹ್ಮಣರು ದೊರೆತಿರುವರು. ನಾನು ನಾಲ್ಕನೇಯವನು-! (ಚಂದನಬಟ್ಟ-ದೀಕ್ಷಿತ ಗೋಪಾಳಭಟ್ಟ ಬರುವರು)

**ಗಿರಿಜಾಬಾಯಿ**—ಇದು ಪರೋಪಕಾರದ ಕೆಲಸವೆಂದು ಅವರಿಗೆ ನೀವು ಈ ಮೊದಲೇ ತಿಳಿಸಿರುವಿರಲ್ಲವೇ?

**ವಿಶ್ವನಾಥಭಟ್ಟ**—ಓಹೋ ತಿಳಿಸಿಯೇ ಅವರನ್ನು ಕರೆದುಕೊಂಡು ಬಂದೆನು. ಅದಕ್ಕೆ ಒಪ್ಪಿರುವರು. ಈ ಕೆಲಸವನ್ನು ಬೇಗನೇ ತೀರಿಸಿ, ಅವರು ಮತ್ತೆ ಬೇಗನೇ ಇಲ್ಲಿಗೆ ಬರಬೇಕಾಗಿದೆ; ಯಾಕಂದರೆ ಇಲ್ಲಿ ದೇವಸ್ಥಾನದಲ್ಲಿ— ದೇವರಿಗೆ ವೈಲಿಗೆಯಾಯಿತೋ ಇಲ್ಲವೋ ಎನ್ನುವ ಚರ್ಚೆ ಆಗಲು ಇಂದು ಮಹಾಸಭೆಯು ನೆರವೇರುವದಲ್ಲವೆ?

**ಚಂದನಭಟ್ಟ**—ಗೋಪಾಳಭಟ್ಟರೇ ಈ ಹುಡುಗೆ ನಮ್ಮ ವೂರವಳು; ಪುಣ್ಯಶೀಲಳು; ಇಂಥವಳ ಸೇವೆ ದೊರಕುವದು ಸಾಮಾನ್ಯ ಪುಣ್ಯವಲ್ಲ. ಹೂ ನಡೆಯಿರಿ ಬೇಗನೇ ಹೋಗೋಣ- ಕೆಲಸವನ್ನು ಬಗೆಹರಿಸಿಬಿಡೋಣ!

**ಗೋಪಾಳಭಟ್ಟ**—ಎಲವೋ ಇವಳು ಆ ಗದಾಧರಪಂತರ ಸೊಸೆಯಲ್ಲವೇನೋ!

**ಚಂದನಭಟ್ಟ**—ಹೌದು- ಅಂತೂ ಒಮ್ಮೆ ಅತ್ತೆಯ ಕಾಟದಿಂದ ಮುಕ್ತಳಾದಳು!

**ಭೈರವಭಟ್ಟ**– ಇದೋ ನೋಡು ನಾವು ಆ ಶಾಸ್ತ್ರಾರ್ಥದ ಸಭೆಗೆ ಹೋಗಲೇ ಬೇಕು. ತೊಂಟನ್ಯಾಯ ಎಬ್ಬಿಸಿ, ದೇವರಿಗೆ ವ್ಯೈಲಿಗೆಯಾಯಿ ತೆಂದು, ಇಲ್ಲದ ಶಾಸ್ತ್ರಾಧಾರ ಹುಡುಕಿದರೆ, ನಾಲ್ಕು ದಿನ ಅನುಷ್ಠಾನದ ಗೊಂದಲ ಎದ್ದೀತು; ಯಾಕೆ ನಾನು ಹೇಳುವದು ಸರಿಯುಲ್ಲವೆ ?—

**ಚಂದನಭಟ್ಟ**—ಮೊದಲು ಈ ಕೆಲಸವನ್ನು ಮುಗಿಸೋಣ; ಯಾಕಂದರೆ ಈ ಹುಡುಗೆ ಏಷ್ಟಾದರೂ ನಮ್ಮ ಪೂರವಳು; ಸತ್ವಶೀಲೆಯು; ಅಂದಮೇಲೆ ಈ ಕೆಲಸ ಎಷ್ಟು ಮುಖ್ಯದ್ದೆಂಬುದನ್ನು ನಾನು ಮತ್ತೆ ಹೇಳಬೇಕೆ? ಇದೋ ನೋಡು, ನಾವು ಅಲ್ಪಸ್ವಲ್ಪ ಪರೋಪಕಾರ ದಲ್ಲಿ ಕಾಲಕಳೆಯುತ್ತಿರಬೇಕು; ದೇಹ ತೆತ್ತಬೇಕು; ಅಂದರೆ— ತಿಳಿದುಕೋ ನಾಳೆ ನಾವೇ ಸತ್ತುಹೋದೆವು ಮತ್ತು ಆಗ ನಮ್ಮ ಸಂಸ್ಕಾರಕ್ಕೆ ಯಾರೂ ಬರದಿದ್ದರೆ, ನಮ್ಮ ಹಿಂದುಳಿದ ಜನರಿಗೆ ಎಷ್ಟು ತೊಂದರೆಯಾದೀತು; ಎಷ್ಟು ಮನಸ್ಸಿಗೆ ಕೆಡಕೆನಿಸಿಕೊಂಡಾರು; ಕಾರಣ ನೀನು ಈಗ ಸುಮ್ಮನೇ ಹಿಂದು ಮುಂದು ನೋಡಬೇಡ. ನಮ್ಮ ಬ್ರಾಹ್ಮಣರಲ್ಲಿ ಇದೊಂದು ದುಷ್ಟಸ್ವಭಾವ ಸೇರಿದೆ ನೋಡು—!

**ಭೈರವಭಟ್ಟ**—ಅದೆಲ್ಲ ನಿಜ. ನಿನ್ನ ವೇದಾಂತವೆಲ್ಲ ನನಗೆ ಒಪ್ಪಿಗೆ ಇದೆ; ಆದರೆ ನಕ್ಷತ್ರ ದರ್ಶನವಾಗುವತನಕ ಬಾಯಲ್ಲಿ ನೀರು ಹಾಕುವಂತಿಲ್ಲ ಅದಕ್ಕೇನು ಹೇಳುವೆ ?

**ಗೋಪಾಳಭಟ್ಟ**—ಇದೋ ನೋಡು ಇದು ಯಾತ್ರಾಸ್ಥಾನ; ಅಂಥ ಯಾವ ನಿರ್ಬಂಧಗಳೂ ಇಲ್ಲಿ ಸಾಗುವದಿಲ್ಲ. ಇಲ್ಲೆಲ್ಲಿ ನಕ್ಷತ್ರ ದರ್ಶನ? ಎಲ್ಲಿಯ ಉಪವಾಸ ಬೀಳೋಣ! ಕೇವಲ ಪಾಂಡು ರಂಗನ ದರ್ಶನ ಮಾತ್ರದಿಂದ ಸಕಲ ಪಾಪಗಳು ತಾವೇ ಪರಿಹಾರ ವಾಗುವ. ಸುಮ್ಮನೇ ದೀರ್ಘ ಸಂಶಯದಲ್ಲಿ ಬಿದ್ದು ಕಾಲಕಳಿ ಯುವದೊಳಿತಲ್ಲ. ನಡೆಯಿರಿ ನಡೆಯಿರಿ ಬೇಗನೇ ಹೋಗೋಣ ಮುಂದಿನ ಕೆಲಸಕ್ಕೆ ಉದ್ಯುಕ್ತರಾಗೋಣ! (ಹೋಗುವರು)

---

## ೫ನೇ ಪ್ರವೇಶ

(ಸ್ಥಳ:— ಪಂಢರಪುರದಲ್ಲಿಯ ಸ್ಮಶಾನದ ದಾರಿ. ಚಿಂತಾತುರನಾದ ಗರುಡನು ಬರುವನು)

**ಗರುಡ**—ಭಲೆ ಇದೊಳ್ಳೆ ತೊಡಕಿನ ಪ್ರಸಂಗವೇ ಬಂದೊದಗಿತು! ಆ ಸಖೂದೇವಿಯು ನಮ್ಮ ದೊರೆಗಳ ಪಾದಗಳಮೇಲೆ ಪ್ರಾಣವನ್ನೇ ಬಿಟ್ಟಳು. ಇಲ್ಲಿಯ ಜನಗಳೆಲ್ಲ– ಅವಳು ಪುಣ್ಯಶಾಲಿಯು– ತ್ಯಾಗಶೀಲೆಯು ಹಾಗೆ ಹೀಗೆ ಎಂದು ಸ್ತೋತ್ರವನ್ನೇ ಪ್ರಾರಂಭಿಸಿರುವರು. ಆದರೆ ನಮಗೆ ನಮ್ಮ ಪಾಪವೇ ಮೂರ್ತಿಮಂತಾಗಿ ಎದುರಿಗೆ ಆ ಎಂದು ಬಾಯ್ದೆರೆದು ನಿಂತಿರುವದಲ್ಲ ಆದಕ್ಕೇನು ಅನ್ನಬೇಕು. ಹಿಂದೆ ಒಂದು ಸಲ ನಾನು ಇಂದ್ರನನ್ನು ಗೆದ್ದು ಅಮೃತವನ್ನು ತಂದೇತೀರಬೇಕಾದ ಪ್ರಸಂಗ ಬಂದೊದಗಿತ್ತು; ಈಗ ಅಂತಹದೇ ಪ್ರಸಂಗ ಮತ್ತೆ ಬಂದು ನಿಂತಿದೆ. ಹಿಂದಿನಂತೆ ಈಗಲೂ ಅಮೃತವನ್ನು ತಂದು ಈ ಸಖೂದೇವಿಯನ್ನು ಬದುಕಿಸಿ, ಅವಳನ್ನು ಪರ್ಯಾಡಕ್ಕೆ ತಲುಪಿಸಬೇಕು. ಹೌದು— ಈಗ ಹಾಗೆ ಮಾಡದೇ ಬೇರೆ ಗತಿಯೇ ಇಲ್ಲ; ಯಾಕಂದರೆ ನಮ್ಮ ದೊರೆಗಳು ಸಖೂದೇವಿಯ ಬದಲಾಗಿ ಆ ಮಾಧವರಾಯನ ಹೆಂಡತಿಯಾಗಿ ಅವರ ಮನೆಯಲ್ಲಿ ಬಾಳುವೆ ಮಾಡುತ್ತಿರುವರು. ಹೆಂಡತಿಯ ಬದಲಾಗಿ ಹೆಂಡತಿಯು ದೊರೆಯುವತನಕ ಆ ಮಾಧವರಾಯನು ನಮ್ಮ ದೊರೆಗಳನ್ನು ಹೇಗೆ ಬಿಡುಗಡೆ ಮಾಡುವನು. ಅವನೋ ನಮ್ಮ ದೇವರ ಸ್ತ್ರೀರೂಪಕ್ಕೆ ತೀರ ಮರುಳಾಗಿ ಹೋಗಿರುವನು. ದೇವರ ಲೀಲೆಯು ಅತಿ ವಿಚಿತ್ರವಾದದ್ದು! ಇನ್ನು ಮುಂದಿನ ದಾರಿ ಯಾವುದು ?—(ಸಚಿಂತಳಾದ ರುಕ್ಮಿಣಿಯು ಬರುವದು ಕಾಣಿಸುವದು.) ಅದೋ ರುಕ್ಮಿಣಿ ದೇವಿಯವರೇ ಇತ್ತ ಬರುತ್ತಿರುವರು. ಅವರೂ ಇದೇ ಚಿಂತೆಯಲ್ಲಿದ್ದಂತೆ ಕಾಣುವದು. ಒಳ್ಳೇದು ಇವರು ಏನು ಮಾತಾಡುತ್ತಾರೊ ಆದನ್ನು ಸ್ವಲ್ಪ ಮರೆಯಾಗಿ ನಿಂತು ಕೇಳೋಣ.

**ರುಕ್ಮಿಣಿ**—(ಪ್ರವೇಶಿಸಿ)

ರಾಗ ಕಾಫಿ, ತಾಳ ತ್ರಿವಟ

**ಎಲ್ಲಿ ಪೋದನೇ ಮಾಧವಾ ॥ ವೈಕುಂಠನಾಥಾ ॥ ಪಲ್ಲ ॥ ಮೋಸವ ಮಾಡಿದನೇ ಮಾಧವಾ ॥ ಅನು ॥ ವಿನಯ ವಚನದಿ ಮನವನೊಲಿಸಿ ತಾ ಅನುರಾಗವ ತೋರಿ ಪೋದಾ ಸುಲಲಿತ ॥ ಇನ್ನು ನಾನೆಲ್ಲಿ ಕಾಣ್ವೆ ಸಹಿಸೆ ವಿಹರವ ॥ ೧ ॥**

(ಸ್ವಗತ) ಎಂಥ ಚಮತ್ಕಾರದ ಪ್ರಸಂಗ ತಾನೇ ಒದಗಿತಲ್ಲ–! ಸಖೂದೇವಿಗೆ ಪಂಢರಪುರದ ಯಾತ್ರೆಯಾಗಬೇಕೆಂದು ನಮ್ಮ ದೇವರು ತಾವೇ ಅವಳ ರೂಪವನ್ನು ಧರಿಸಿ ಅವಳ ಮನೆಯಲ್ಲಿ ವಾಸಮಾಡತೊಡಗಿದರು; ಮಾಧವರಾಯನ ಸೇವೆಯನ್ನು ತಾವೇ ಕೈಕೊಂಡರು. ಇದೆಂತಹ ಭಕ್ತವಾತ್ಸಲ್ಯವೊ ಏನೊ! ಎರಡು ದಿನದಲ್ಲಿ ಪಂಢರಪುರಕ್ಕೆ ಬಂದ ಸಖೂದೇವಿಯು ತಿರುಗಿ ತನ್ನ ಸ್ವಗ್ರಾಮಕ್ಕೆ ಹೋಗುತ್ತಾಳೆಂದು ನಾನು ತಿಳಿದಿದ್ದೆನು; ಆದರೆ ಅವಳೇಕೆ ತಿರುಗಿ ಹೋದಾಳು. ಯಾತ್ರೆಗಾಗಿ ಬಂದವಳು, ಕೊನೆಗೆ ದೇವರ ಪಾದಗಳ ಮೇಲೆಯೇ ತನ್ನ ಪ್ರಾಣವನ್ನು ನೀಗಿದಳು. ಇನ್ನು ಮೇಲೆ ನಮ್ಮ ದೇವರ ಬಿಡುಗಡೆಯಾಗುವ ಮಾರ್ಗ ಯಾವುದು? ಸಖೂದೇವಿಯು ಜೀವಂತಳಾಗಿ ತನ್ನ ಅತ್ತೆಯ ಮನೆಗೆ ಹೋಗುವ ತನಕ ನಮ್ಮ ದೇವರ ಬಿಡುಗಡೆಯಾಗುವದು ಸಾಧ್ಯವೇ ಇಲ್ಲ. ಗೊತ್ತಿದ್ದ ಮಾತೇ ಅದು! ಈಗ ಅಮೃತಸಂಜೀವಿನಿಯಿಂದ ಅವಳನ್ನು ಬದುಕಿಸಿ, ಅವಳನ್ನು ಅತ್ತೆಯ ಮನೆಗೆ ಕಳಿಸಬೇಕು. ಸರಿ ಅದೇ ಕೆಲಸಕ್ಕೆ ತೊಡಗೋಣ. ಈಗ ಗರುಡನನ್ನು ಕರೆದು ಮೊದಲು ಅವಳನ್ನು ದಹನ ಮಾಡಿದ ಸ್ಥಾನವನ್ನು ಹುಡುಕೋಣ. ಎಲವೊ— ಗರುಡಾ—!

**ಗರುಡ**—(ಪ್ರವೇಶಿಸಿ) ತಾಯೀ ಏನಪ್ಪಣೆ–!

**ರುಕ್ಮಿಣಿ**—ಸರಿ ನಾನು ಕರೆಯುವದೇ ತಡ ನೀನು ಸಿದ್ಧನೇ ಇರುವಿ! ಇಲ್ಲಿಯೇ ಎಲ್ಲಿಯಾದರೂ ಅಡಗಿಕೊಂಡು ಕುಳಿತಿದ್ದೆಯೋ ಏನು ?

**ಗರುಡ**—ತಾಯೀ ನಾನೇನು ಮಾಡಲಿ; ತಾವು ಯಾವಾಗ್ಗೆ ಕರೆಯುವಿರೋ ಎಂದು ದಾರಿಕಾಯುತ್ತ ಕುಳಿತಿದ್ದೆ ಅದರಲ್ಲೂ ಇಂಥ ಪ್ರಸಂಗ?—

**ರುಕ್ಮಿಣಿ**—ಈ ಎಲ್ಲ ಪ್ರಸಂಗಕ್ಕೂ ನೀನೇ ಕಾರಣನು—!

**ಗರುಡ**—ತಾಯೀ ಸುಮ್ಮನೇ ಈ ಬಡವನ ಮೇಲೇಕೆ ಕೋಪಿಸುವಿರಿ? ನಾನು ಚರಣಸೇವಕನು. ತಾವು ಹೇಳಿದಷ್ಟು ಮಾಡುವದು ನನ್ನ ಕೆಲಸ. ದೇವೀ ಈ ಹುಡುಗೆಯೇನೋ ಚಿರಕಾಲ ದೇವರ ಸನ್ನಿಧಾನದಲ್ಲಿ ವಾಸಮಾಡಬೇಕೆಂದು ತನ್ನ ದೇಹವನ್ನು ನೀಗಿದಳು. ಇನ್ನುಮುಂದೆ ಅತ್ತ ದೇವರ ಅವಸ್ಥೆ ಏನು; ನಿಮ್ಮ ಸ್ಥಿತಿ ಏನು; ಮತ್ತು ನಮ್ಮ ಗತಿ ಏನು?— ಯಾವುದಾದರೂ ಹಂಚಿಕೆ ಮಾಡಿ ದೇವರು ಇಲ್ಲಿಗೆ ಬರುವಂತೆ ಮಾಡುವದು, ಮೊದಲ ಕರ್ತವ್ಯವಲ್ಲವೆ? ನೀವು ಮೊದಲು ಆಬಗ್ಗೆ ಯೋಚನೆ ಮಾಡಬೇಕು.—

**ರುಕ್ಮಿಣಿ**—ಎಲವೋ ಅದಕ್ಕೆ ನಾನೇನು ಮಾಡಲಿ? ಅವರ ಮನಸ್ಸಿಗೆ ಬಂದಾಗ ಬರಲಿ ಬಿಡು!

**ಗರುಡ**—ಅಂತೂ ದೇವರಿಗೆ ಪತಿಸೇವೆಯ ಅನುಭವವು ಚನ್ನಾಗಿ ಬರಲೆಂದು, ತಮ್ಮ ಆಭಿಪ್ರಾಯವಿದ್ದಂತೆ ಕಾಣುವದು.

**ರುಕ್ಮಿಣಿ**—ಹೌದು ಕಠಿಣವಾದ ಪತಿಸೇವೆಯ ಅನುಭವವು ಅವರಿಗೂ ಸ್ವಲ್ಪ ಬರಲಿ. ಹೆಂಗಸಿನ ಬಾಳು ಎಂಥ ಕಷ್ಟದ್ದೆಂಬುದು ಅವರಿಗೂ ಸ್ವಲ್ಪ ಹೊಳೆಯಲಿ; ಯಾಕಂದರೆ, ಹೆಣ್ಣಿನ ಜನ್ಮ ಬಂದಾಗಲೇ ಅದರ ಗೋಳು ಗೊತ್ತಾಗುವದು. ಬರಲಿ ಬರಲಿ- ದೇವರಿಗೆ ಚನ್ನಾಗಿ ಅನುಭವ ಬರಲಿ.

**ಗರುಡ**—ತಾಯೀ ತಾವು ಹೀಗೆಲ್ಲ ಮಾಡುವದುಂಟೆ? ಅವರು ಬೇಗನೇ ಬರುವಂತೆ ಯಾವುದಾದರೊಂದು ದಾರಿ ತೆಗೆಯಲೇ ಬೇಕು.

**ರುಕ್ಮಿಣಿ**—ಇಲ್ಲದಿದ್ದರೇನಾಗುವದು?—

**ಗರುಡ**—ಆಗುವದೇನು- ನನ್ನ ಹೆಂಡತಿಗೆ ನನ್ನ ಅಗತ್ಯವಿಲ್ಲವೆಂದು ತಿಳಿದು ಆ ಮಾಧವರಾಯನ ಹೆಂಡತಿಯಾಗಿ ಕಾಲಕಳೆಯುತ್ತಾರೆ. ಅಮ್ಮನವರೇ- ಅಲ್ಲಿ ಅವರಿಗೆ ಯಾವ ತೊಂದರೆಯೂ ಇಲ್ಲ. ಅವರು ಅವನ ಸೇವೆಯನ್ನು ಮಾಡುವದರ ಬದಲು, ಅವನೇ ಅವರ ಸೇವೆಯನ್ನು ಮಾಡುತ್ತಿರುವನು. ಭಕ್ತಿಯಿಂದ ನೈವೇದ್ಯ

ತೋರಿಸುವನು. ಅಲ್ಲಿ ದೇವರ ಸೌಖ್ಯಕ್ಕೆ ಎಣೆಯಿಲ್ಲ; ಅದಕ್ಕೆಂದೇ ನಾನು ಬೇಡಿಕೊಳ್ಳುವದೇನಂದರೆ, ಹೇಗಾದರೂಮಾಡಿ ದೇವರನ್ನು ಇಲ್ಲಿಗೆ ಕರೆಯಿಸಿಕೊಳ್ಳಿರಿ.

**ರುಕ್ಮಿಣಿ**—ಅದಕ್ಕೆ ಬೇರೆ ಉಪಾಯವೇ ಇಲ್ಲ. ಅನನ್ಯಭಾವದಿಂದ ಅವರನ್ನು ಸ್ಮರಿಸೋಣ ಅದೊಂದೇ ಈಗುಳಿದ ದಾರಿ!

**ಗರುಡ**—ತಾಯೀ ಇನ್ನು ನೀವು ವೇಳೆ ಕಳೆಯಬೇಡಿ! ಬೇಗನೇ ಅವಳನ್ನು ಬದುಕಿಸಿರಿ. ನಾನವಳನ್ನು ಕರೆದುಕೊಂಡು ಹೋಗಿ-ಕರ್ಹಾಡಕ್ಕೆ ತಲುಪಿಸುತ್ತೇನೆ. ಮೊದಲು ನಾನೀಗ ಸ್ವರ್ಗಲೋಕಕ್ಕೆ ಹಾರಿ ಅಮೃತ ಸಂಜೀವಿನಿಯನ್ನು ತರಲೇಬೇಕು. ಹೀಗಲ್ಲವೇ ತಮ್ಮ ಅಭಿಪ್ರಾಯವು!

**ರುಕ್ಮಿಣಿ**—ಹೌದು- ನಾನೂ ಅದೇ ಯೋಚನೆಯಲ್ಲಿಯೇ ಇದ್ದೇನೆ. ನಡೆ ಹಾಗಾದರೆ—(ತೆರೆ ಬೀಳುವದು ಇಬ್ಬರೂ ಹೋಗುವರು)

---

## ೭ನೇ ಪ್ರವೇಶ

(ಸ್ಥಳ:— ಸ್ಮಶಾನ. ಕೆಲವು ಉರಿಯುತ್ತಿರುವ ಮತ್ತು ಕೆಲವು ಅರ್ಧ ಆರಿದ ಚಿತೆಗಳು ಕಾಣುತ್ತವೆ. ಗರುಡ ಹಾಗೂ ರುಕ್ಮಿಣಿದೇವಿಯುವರು ಬರುತ್ತಾರೆ.)

**ರುಕ್ಮಿಣಿ**—ಗರುಡಾ ಅವಳನ್ನು ದಹನ ಮಾಡಿದ ಸ್ಥಾನವು— ನಿನಗೆ, ಚನ್ನಾಗಿ ಗೊತ್ತಿದೆಯಲ್ಲವೆ?

**ಗರುಡ**—ತಾಯೀ ಸ್ವಲ್ಪ ನಿದಾನಿಸಿರಿ; ಯಾಕಂದರೆ-ಅವಳ ಬದಲಾಗಿ ಯಾವುದಾದರೊಂದು ಹಳೇ ಮುದುಕಿಯು ಬುದಂಗನೇ ಎದ್ದು ಕುಳಿತೀತು! (ಅಚೆಈಚೆ ಹುಡುಕುವನು. ನೋಡಿ) ತಾಯೀ ಇದೋ ಈ ಸ್ಥಳವು—!

**ರುಕ್ಮಿಣಿ**—ಹೌದು- ಇದೇ ಸ್ಥಳವೇ ನಿಜ! ಎಲೈ ವೈಕುಂಠ ಮಾರ್ಗವಾಗಿ ಹೋಗುವ ಜೀವವೇ— ಅಮೃತ ಸಂಜೀವಿನಿಯಿಂದ— ನೀನು ಪುನಹ ದೇಹಧಾರಣೆಯನ್ನು ಮಾಡು—!

ರಾಗ ಸಾವೇರಿ, ತಾಳ ದಾದರಾ

**ವಾಸಿಪ ಜೀವವೇ। ವೈಕುಂಠದಿ । ಪೋಷಿಪೆ ನಿನ್ನಯ ದೇಹವ ಪೊಂದಿರು । ಕ್ಲೇಶವ ನೀಗಿಸಿ ಸಾಖ್ಯವನೀಯುವೆ ॥ ಪಲ್ಲ ॥ ನಿನ್ನಯ ಭಕ್ತಿಯ ದೈನ್ಯದಿ ಮನ್ನಿಸಿ । ಬಣ್ಣಿಸಿ ಪಾಡುವೆ ಸಜ್ಜನಪ್ರಿಯಳೇ ॥ ಸನ್ನುತ ಕಾಯಳೆ ಸನ್ಮಾನ್ಯವಂದಿತೆ । ಧನ್ಯಶುಭಾಂಗಿಯೆ ಜ್ಞಾನದ ಭಾಂಡಾರವೇ ॥ ೧ ॥**

(ಸಖೂದೇವಿಯು ಜೀವಂತಳಾಗುವಳು. ನಿದ್ರಾವಸ್ಥೆಯಲ್ಲಿರುವಳು)

**ಗರುಡ**—ಇವಳಿಗಂತೂ ಜೀವ ಬಂದಿತು !

**ರುಕ್ಮಿಣಿ**—ಆದರೆ- ಗರುಡಾ ನಾನಿವಳನ್ನು ಇಲ್ಲಿಯೇ ಪೂರ್ತಿಯಾಗಿ ಜಾಗ್ರತೆಯನ್ನಾಗಿ ಮಾಡುವದಿಲ್ಲ. ಅವಳು ಹಾಗೇ ಸ್ವಪ್ನಮಯ ಸ್ಥಿತಿಯಲ್ಲಿಯೇ ಉಳಿಯಲಿ. ನಾನೀಗ ಇವಳಿಗೆ ಕೆಲವು ಉಪದೇಶ ಮಾಡುತ್ತೇನೆ; ಆಮೇಲೆ ನೀನು ಇವಳನ್ನು ಕರ್ಹಾಡಕ್ಕೆ ತಲುಪಿಸು; ಅಲ್ಲಿ ನಮ್ಮ ದೇವರು ಇವಳನ್ನು ಅವಳ ಮನೆಯಲ್ಲಿ ಬಿಟ್ಟು ತಾವು ಇತ್ತ ಬರುವರು.

**ಗರುಡ**—ಸರಿ- ಅಷ್ಟೇ ಕೆಲಸವನ್ನು ಮಾಡುತ್ತೇನೆ. ಇಂದ್ರಲೋಕಕ್ಕೆ ಹೋಗಿ ಅಮೃತ ಸಂಜೀವಿನಿಯನ್ನು ತರುವ ಖಟಾಟೋಪವು ತಾನೇ ತಪ್ಪಿತು. ಇಷ್ಟರಿಂದಲೇ ನಮ್ಮ ಕೆಲಸವು ಕೊನೆಗಂಡಿತು. ಆದೇನು ಸಾಮಾನ್ಯವಲ್ಲ!— (ತೆರೆ ಬೀಳುವದು)

## ೭ನೇ ಪ್ರವೇಶ

(ಸ್ಥಳ:—ಕರ್ಹಾಡ ನದಿಗೆ ಹೋಗುವ ದಾರಿ ಸಖೂದೇವಿಯು ಬರುವಳು. ಸಮೀಪದಿಂದ ಗರುಡನೂ ಬರುತ್ತಿದ್ದಾನೆ.)

**ಸಖೂದೇವಿ**—ಆದೇನು ಕಾರಣವಿದ್ದೀತೋ ಏನೋ- ಮೇಲಿಂದಮೇಲೆ ನನಗೆ- ಅದೇ ಸ್ವಪ್ನವೇ ಸೆನಪಾಗಿ, ಆಶ್ಚರ್ಯವಾಗುತ್ತಿದೆ.

**ಗರುಡ**—ಹೌದು ತಾಯೀ ನನಗೂ ಬಹಳ ಆಶ್ಚರ್ಯವಾಗುತ್ತಿದೆ. ನಿಮ್ಮ ಮೇಲೆ ದೇವರದು ಪೂರ್ಣವಾದ ಕೃಪೆಯಾಗಿದೆಯೆಂದೇ ನೀವು ತಿಳಿಯಬೇಕು; ಯಾಕಂದರೆ-ಸ್ವಪ್ನದಲ್ಲಿಯೇ ಆಗಲಿ-ಭಗವಂತನ

ದರ್ಶನವಾಗುವದು ಸಾಮಾನ್ಯ ಮಾತಲ್ಲ; ಖಂಡಿತವಾಗಿ ನಿಮ್ಮ ಮೇಲೆ ದೇವರ ಅನುಗ್ರಹವು ಪೂರ್ತಿಯಾಗಿ ಆಗಿರುವದು.

**ಸಖೂದೇವಿ**—ರುಕ್ಮಿಣಿ ಮಾತೆಯವರು ನನಗೆ ಸ್ಪಷ್ಟವಾಗಿ ದರ್ಶನ ಕೊಟ್ಟರು. ನನ್ನ ಕೂಡ ಮಾತಾಡಿದರು; ಅವರ ರೂಪ; ಅವರ ಮಾತು ನನಗೆ-ಚನ್ನಾಗಿ ನೆನಪಿಗೆ ಬರುತ್ತವೆ. ಅವರು ನನ್ನ ಕೂಡ ಏನು ಮಾತಾಡಿದರೆಂಬುದನ್ನು ಹೇಳಲೇ— (ನೆನಪು ಮಾಡಿ ಕೊಂಡು) ಮಗಳೇ ಏಳು. ನಿನ್ನ ಭಕ್ತಿಗೆ ನಾನು ಮೆಚ್ಚಿದೆನು; ಸಂತುಷ್ಟಳಾದೆನು. ನಿನ್ನಂಥ ಭಕ್ತಳು ದೊರಕುವದು ಅಸಾಧ್ಯ. ದೇವರ ಪಾದಗಳ ಮೇಲೆ ನೀನು– ನಿನ್ನ ಪ್ರಾಣವನ್ನು ಅರ್ಪಿಸಿದ್ದೆ; ಆದರೆ ನೀನಿನ್ನೂ ಚಿಕ್ಕವಳು; ಈಗಾಗಲೇ ನಿನಗೆ ವೈಕುಂಠಯಾತ್ರೆ ಯೋಗ್ಯವಲ್ಲ; ಹಾಗೆಂದು ಯೋಚನೆ ಮಾಡಿ ನಾನು ನಿನಗೆ ಮತ್ತೆ ಜನ್ಮಕೊಟ್ಟಿದ್ದೇನೆ. ನೀನಿನ್ನು ನಿನ್ನ ಮನೆಗೆ ಹೋಗು. ನಿನಗೆ ಸುಖವಾಗುವದು. ಇನ್ನು ಮುಂದೆ ನಿನ್ನ ಅತ್ತೆ--ಮಾವ--ಗಂಡ ನಿನ್ನನ್ನು ಪ್ರೀತಿಸುವರು. ಮನೆಗೆ ಹೋಗು– ಮನೆಗೆ ಹೋಗು–" ಎಂದು ಮೂರುಸಲ ಸಾರಿ ಹೇಳಿದರು. ಇನ್ನೂವರೆಗೂ ನನಗೆ ಆ ಶಬ್ದಗಳು ಸ್ಮರಿಸುತ್ತವೆ.

**ಗರುಡ**—ಅವ್ವಾ ದೃಢನಿಶ್ಚಯದಿಂದ ಮಾಡಿದ ಯಾತ್ರೆಯ ಫಲವೇ ಇದು. ನಾನಿನ್ನು ಹೋಗಲೇ ಪಂಢರಪುರಕ್ಕೆ! ನಿಮ್ಮನ್ನು ಪಂಢರ ಪುರಕ್ಕೆ ಕರೆದುಕೊಂಡು ಹೋಗಿ ತಿರುಗಿ ತಲುಪಿಸಿದೆನೆಂದು ನಿಮ್ಮ ಜೊತೆಗೆ ಕಳಿಸಿದವರಿಗೆ ನಾನು ಹೇಳಬೇಕಲ್ಲವೆ?—

**ಸಖೂದೇವಿ**—ಅಣ್ಣಾ– ನೀನು ನನಗೆ ಮಾಡಿದ ಉಪಕಾರಕ್ಕೆ ಪ್ರತಿಫಲ ವನ್ನು ಕೊಡಲು ನನ್ನ ಕೈಯಲ್ಲಿ ಏನೂ ಇಲ್ಲ. ಮನೆಗೆ ಕರೆದು ಕೊಂಡು ಹೋಗಿ, ನಿನಗೆ ಚನ್ನಾಗಿ ಉಪಚಾರಮಾಡಬೇಕೆಂದರೆ, ಅದೂ ನನ್ನ ಕೈಯಲ್ಲಿಲ್ಲ; ಅಷ್ಟು ಸ್ವತಂತ್ರತೆಯೂ ನನಗಿಲ್ಲ. ನಾನು ಸುಖದ ದಿನಗಳನ್ನು ಕಂಡಾಗ ನೀನು ಬಾ ಅಂದರೆ ಆಗ ನಿನಗೆ ಏನಾದರೂ ಕೊಡುತ್ತೇನೆ.

**ಗರುಡ**—ಅವ್ವಾ ತಮಗೆ ಬೇಗನೇ ಸುಖದ ದಿನಗಳು ಬರಲಿ; ಆಗ

ನಾನು ತಮ್ಮ ಕಡೆಗೆ ಬಂದೇತೀರುವೆನು; ಮತ್ತು ಬಹುಮಾನ ವನ್ನೂ ಪಡೆಯುವೆನು. ನಾನೀಗ ಹೋಗಲೇ ತಾಯಿ. (ಹೋಗುವನು)

**ಸಖೂದೇವಿ**— ಆಹಹಾ ಪಂಢರಪುರದ ವೈಭವವನ್ನು ಎಷ್ಟು ವರ್ಣಿಸುವದು! ಅಲ್ಲಿರುವ ಜನಗಳೇ ಭಾಗ್ಯಶಾಲಿಗಳು. ಕೊನೆತನಕ ನಾನು ಅಲ್ಲಿಯೇ ಇರಬೇಕೆಂದು ನಿರ್ಧಾರ ಮಾಡಿದ್ದೆನು; ಆದರೆ ಅದು ರುಕ್ಮಿಣಿ ದೇವಿಯವರ ಮನಸ್ಸಿಗೆ ಬರಲಿಲ್ಲ. ಅವರು "ನೀನಿಲ್ಲಿರ ಬೇಡ ನಿಮ್ಮೂರಿಗೆ ಹೋಗು" ಎಂದು ಹೇಳಿದ್ದರಿಂದ ನಾನು ಏನು ತಾನೆ ಮಾಡಲಿ. ಅವರ ಆಶೀರ್ವಾದ ಪಡೆದು ನೆಟ್ಟಗೆ ನಾನು ಮನೆಯ ದಾರಿ ಹಿಡಿದೆನು. ಇನ್ನುಮುಂದೆ ಮನೆಯಲ್ಲೂ ನನಗೆ ಕಷ್ಟವಾಗಲಾರದು. ದೇವರ ದರ್ಶನ ಪಡೆದು ಮನೆಗೆ ಹೋಗುತ್ತೇನೆ.—

ರಾಗ ಭೈರವಿ, ತಾಳ ತ್ರಿವಟ

**ಅರಿಯರು ಹರಿಯ ಮಹಾಮಹಿಮೇ । ಸಿರಿ ಬ್ರಹ್ಮಾದ್ಯರಿಗೆ ॥ ಪಲ್ಲ ॥ ಕನಸಿನೋಳೀ ದಿನ । ಜನನಿ ರುಕ್ಮಿಣಿ ॥ ಎನಗಾಶೀರ್ವದಿಸಿ । ಸನ್ಮೋದದಿ ಸಂಭಾವಿಸಿ ಪೋದಳು ॥ ಧನ್ಯಳು ನಾ ಜಗದೆ ॥ ೧ ॥**

---

## ೮ ನೇ ಪ್ರವೇಶ

ಸ್ಥಳ:— ಕರ್ಹಾಡ ನದಿಗೆ ಹೋಗುವ ದಾರಿ. ವಿಠ್ಠಲನು ಗಿರಿಜಾಬಾಯಿಯ ರೂಪದಲ್ಲಿ ಬರುವನು.

**ಗಿರಿಜಾಬಾಯಿ**— ಗರುಡನ ಜೊತೆಮಾಡಿ ಸಖೂದೇವಿಯನ್ನು ಪಂಢರಪುರಕ್ಕೆ ಕಳಿಸಿದ ಕೆಲಸ ಮತ್ತು ಸಖೂದೇವಿಯ ರೂಪವನ್ನು ಧರಿಸಿ, ಇಲ್ಲಿ ನಾವು ಮಾಡಬೇಕಾದ ಕೆಲಸ ಇವೆರಡೂ ಕಾರ್ಯಗಳು ನಿರಾತಂಕವಾಗಿ ಕೊನೆಗಂಡವು; ಮತ್ತು ಅಲ್ಲಿ ಸಖೂದೇವಿಯು ನಮ್ಮ ಪಾದಗಳಮೇಲೆ ಜೀವ ಬಿಟ್ಟದ್ದು ಮುಂದೆ ರುಕ್ಮಿಣಿಯು ಅವಳನ್ನು ಬದುಕಿಸಿದ ಕಥೆಯೂ ತಿಳಿದವು. ಸಖುದೇವಿಯು ಇಂದು ಇಲ್ಲಿಗೆ ಬರುವಳೆಂದು ಸುದ್ದಿ ತಿಳಿದಕೂಡಲೇ ನಾನು ನೀರು ತರುತ್ತೇನೆಂದು ಹಟಹಿಡಿದು ನದಿಯ ದಾರಿ ಹಿಡಿದೆನು. ಮನೆಯಲ್ಲಿ

ಪತಿರಾಯರು ಅದೆಷ್ಟೋ ಗದ್ದಲ ಮಾಡಿದರು; ಯಾಕಂದರೆ ಈ ವರೆಗೆ ಅವರು ನನಗೆ ನೀರು ತರಲು ಹೋಗಗೊಟ್ಟಿರಲಿಲ್ಲ. ಇಂದು ನಾನು ಹಟಹಿಡಿದದ್ದು ನೋಡಿ ಅವರಿಗೆ ಬಹಳ ಆಶ್ಚರ್ಯವಾಯಿತು. ಅಂತೂ ಹಾಗೆ- ಹೀಗೆ ಮಾಡಿ ನೀರಿಗೆಂದು ಬಂದೇಬಿಟ್ಟೆನು ಮತ್ತು- ಮಾರ್ಗದಲ್ಲಿ ಈ ಗಿರಿಜಾಬಾಯಿಯ ರೂಪವನ್ನು ಧರಿಸಿದೆನು. ಇನ್ನು ಸಖೂದೇವಿಯು ಎದುರಾದ ಕೂಡಲೆ ಅವಳಿಗೆ ಈ ಕೊಡವನ್ನು ಕೊಡುವೆನು- ಮತ್ತು- ಮನೆಯವರಿಗೆ ನೀರು ತರಲು ಹೋದ ಸಖೂದೇವಿಯೇ ತಿರುಗಿ ಬಂದಳೆಂಬ- ಸಣ್ಣ ಪ್ರವೇಶವನ್ನು ತೋರಿಸಿ-ನಮ್ಮ ಈ ನಾಟಕವನ್ನು ಮುಗಿಸುತ್ತೇನೆ. (ಸಖೂದೇವಿಯು ಎದುರಾಗಿ ಬರುವಳು) ಬಾರಮ್ಮಾ ಸಖೂದೇವಿ ಬಾ ತಾಯೀ- ನಿನ್ನ ಯಾತ್ರೆಯು ಸುಗಮವಾಗಿ ಸಫಲವಾಯಿತೆ? ನಾನಿನ್ನು ನನ್ನ ಸ್ಥಾನಕ್ಕೆ ಹೋಗುತ್ತೇನೆ. ನಿನ್ನೊಡನೆ ಮಾತಾಡಲು ನನಗೀಗ ವೇಳೆಯಿಲ್ಲ; ಆದರೆ ನೀನಿಷ್ಟು ಕೆಲಸ ಮಾಡು. ಇದು ನಿಮ್ಮ ಮನೆಯ ಕೊಡ ನಾನು ತೆಗೆದುಕೊಂಡು ಬಂದಿದ್ದೆನು. ಈಗ ನೀನು ಇದನ್ನು ತೆಗೆದುಕೊಂಡು ಹೋಗು.

ರಾಗ ಜಂಗಲಾ, ತಾಳ ತ್ರಿವಟ

**ಒಲಿದನು ಗೋಪಾಲ ನಿನಗೆ ॥ ನಲಿದನೇ ವಿಮಲತವ ಭಾವಕೆ ಮರುಳುಗೊಳಿಸಿದೆ ಹರಿಯನುಬಾಲೆ ॥ ಪರಮ ಪದವ ಸಂಪಾದಿಸಿದೆ ॥ ೧ ॥ ಜಗದಾಣ್ಮನು ತವ ಕಿಂಕರನಾಗಿ ॥ ಬಗೆಬಗೆ ಲೀಲೆಯ ತೋರಿದನೆ ॥ ೨ ॥ ಜಗದೊಳು ಸಕಲ ಸುಜನರು ನಿನ್ನ॥ ಪೊಗಳಲಿ ಕೀರ್ತಿಯ ಪಾವನೆಯೇ ॥ ೩ ॥**

**ಸಖೂದೇವಿ**—ಆದರೆ ಗಿರಿಜಾಬಾಯಿಯವರೇ- ನಿಮ್ಮ ಉಪಕಾರವನ್ನು-

**ಗಿರಿಜಾಬಾಯಿ**—ಈಗ ಯಾವ ಮಾತೂ ಆಡಬೇಡ. ನನಗೆ ಸಮಯವಿಲ್ಲ. ನಿನ್ನ ಕೂಡ ಮಾತಾಡುತ್ತ ನಿಂತರೆ ಅವರು ನನ್ನನ್ನು ಹುಡುಕುತ್ತ ಬರುವರು. ನಾನು ನಿನಗೆ ಮತ್ತೆಂದಾದರೂ ಭೆಟ್ಟಿಯಾಗುತ್ತೇನೆ. (ಅವಳನ್ನೇ ನೋಡುತ್ತ ಹೋಗುವಳು)

**ಸಖೂದೇವಿ**—ಆಹಹಾ ಏನೀ ಆಶ್ಚರ್ಯಕಾರಕ ನೋಟವು. ಇವರು ನನ್ನನ್ನು ಹೀಗೇಕೆ ನೋಡುತ್ತ ಹೋದರು! ನಮ್ಮ ಮನೆಯ ಕೊಡವು

ಇವರ ಕೈಯಲ್ಲಿ ಹೇಗೆ ಬಂತು! ನಮ್ಮ ಅತ್ತೆಯವರ ಸ್ವಭಾವ ದಲ್ಲಿಯೇ ಏನಾದರೂ ಬದಲಾವಣೆಯಾಗಿದ್ದೀತೆ! ಮನೆಗೆ ಹೋಗೋಣ ಎಂದರೆ ಎಲ್ಲ ತಾನೇ ತಿಳಿಯುವದು.

(ಹೋಗುವಳು) (ತೆರೆ ಬೀಳುವದು)

---

## ೯ನೇ ಪ್ರವೇಶ

(ಸ್ಥಳ:—, ಗದಾಧರಪಂತರ ಮನೆಯ ಪಡಸಾಲೆ. ನಶ್ಯದ ಡಬ್ಬಿಯನ್ನು ಕೈಯಲ್ಲಿ ಹಿಡಿದು ಗದಾಧರಪಂತರು ಬರುವರು)

**ಗದಾಧರಪಂತ**—ಹಚ್ಚಿಕೊಂಡಷ್ಟೂ ಈ ಪ್ರಪಂಚದ ವ್ಯಾಪ- ಮತ್ತು ಅದರಿಂದ ಉಂಟಾಗುವ ದುಃಖ ಹೆಚ್ಚಾಗುತ್ತವೆ. ಸಖೂದೇವಿಯು ಇಲ್ಲಿಂದ ಹೇಗೆ ಹೋದಳೋ ಮತ್ತು ಅಲ್ಲಿ ತಿರಿಕೊಂಡದ್ದು ಹೇಗೋ ಅದು ಯಾವುದೂ ತಿಳಿಯುವದಿಲ್ಲ, ಹೊಳೆಯುವುದಿಲ್ಲ; ಇದೇನು ಚಮತ್ಕಾರವಿದ್ದೀತು!

**ಮಹಿಪತಿ**—ಗದಾಧರಪಂತರೆ ನಿಮಗೆ ಈ ಸಂಗತಿಯನ್ನು ತಿಳಿಸಿದವ ರಾರು?—

**ಗದಾಧರಪಂತ**—ಪಂಢರಪುರಕ್ಕೆ ಹೋದ ಕೆಲ ಯಾತ್ರಿಕರು ತಿರುಗಿ ಬರು ವಾಗ ನಮ್ಮ ತೋಟದ ಮೇಲೆಯೇ ಹಾದು ಹೋಗುತ್ತಿದ್ದರು. ಅವರು ನನಗೀವಾರ್ತೆಯನ್ನು ತಿಳಿಸಿದರು; ಆದರೆ ನಾನಿಲ್ಲಿ ನೋಡುತ್ತೇನೆ ಎಲ್ಲವೂ ವಿಚಿತ್ರವೆ!

**ಶ್ರೀಪತರಾವ**—ನಿಜವಾಗಿಯೂ ಇದು ವಿಚಿತ್ರವಾದ ಸಂಗತಿಯೆ!

(ಚಂದನಭಟ್ಟ ಭೈರವಭಟ್ಟ ಮೊದಲಾದವರು ಬರುವರು. ಅವರ ಹಿಂದಿನಿಂದ ಮಾಧವ ಪದ್ಮಾವತಿ ಚಂಡಿಕಾಬಾಯಿಯವರು ಬರುವರು)

**ಮಾಧವ**—ಶಾಸ್ತ್ರಿಗಳೇ ನಿಮ್ಮ ಗತ್ತು ನಮಗೆ ತಿಳಿಯವೆಂದು ನೀವು ತಿಳಿ ದಿರುವಿರೋ ಅಥವಾ, ನೀವು ಮೂವರೂ ಒಟ್ಟುಗೂಡಿ, ನಮ್ಮಿಂದ ಏನಾದರೂ ಹಣವನ್ನು ಎಬ್ಬಿಸಲು ಯಾವುದಾದರೂ ಹಂಚಿಕೆ ಯನ್ನು ಹಾಕಿಕೊಂಡು ಬಂದಿರುವಿರೊ?—

**ಚಂಡಿಕಾಬಾಯಿ**—ಎಲಾ ಮುತ್ತಾಳರೇ- ಈಗ ಹದಿನೈದು ದಿನದಿಂದ

ನಮ್ಮ ಸೊಸೆಯು ನಮ್ಮ ಕಣ್ಣೆದುರಿಗೇ ಓಡಾಡಿಕೊಂಡು ಇದ್ದಾಳೆ; ಮತ್ತು ಮೊದಲಿನ ದೇವರ ಭಜನೆ ಮುಂತಾದ ದುಶ್ಚಟವನ್ನು ಬಿಟ್ಟು ಎಂಥ ಒಳ್ಳೆಯವಳಾಗಿ ನಡೆಯುತ್ತಿದ್ದಾಳೆ; ಆದರೆ ನೀವು ಹೇಳುತ್ತೀರಿ- ಅವಳು ಪಂಢರಪುರಕ್ಕೆ ಬಂದಿದ್ದಳು; ದೇವರ ಪಾದಗಳಮೇಲೆ ಪ್ರಾಣಬಿಟ್ಟಳು; ಅಗ್ನಿಸಂಸ್ಕಾರ ಮಾಡಿದೆವು; ಹಾಗೆ ಹೀಗೆ ಎಂದು ಸಿಕ್ಕ ಸಿಕ್ಕ ಹಾಗೆ ಬೊಗಳುತ್ತೀರಿ. ನಿಮ್ಮಂಥ ಮೋಸಗಾರರಿಗೆ ಎಂಥ ಶಾಸನ ಮಾಡಬೇಕೆಂದರೆ—

**ಚಂದನಭಟ್ಟ**—ತಾಯೀ ಸುಮ್ಮಸುಮ್ಮನೇ ಯಾಕೆ ನಮ್ಮನ್ನು ಮೋಸಗಾರರೆಂದು ಕರೆಯುವಿರಿ! ಸತ್ಯವಾದದ್ದನ್ನು ನಾವು ಹೇಳಿದರೆ ಅದಕ್ಕೆ ಇಂಥ ಪ್ರತ್ಯುಪಕಾರವೆ ?—

**ಭೈರವಭಟ್ಟ**—ಈ ವಿಷಯದಲ್ಲಿ ನಮಗೆ ಯಾರದೂ ಅಂಜಿಕೆ ಇಲ್ಲ; ಅದಕ್ಕೆ ಪ್ರತ್ಯಕ್ಷ ವಿಠ್ಠಲನೇ ಸಾಕ್ಷಿಯು. ನಾವಾದರೂ ಅವಳ ಅಗ್ನಿ ಸಂಸ್ಕಾರಕ್ಕೆ ಹೋಗುತ್ತಿರಲಿಲ್ಲ; ಆದರೆ ಆ ವಿಶ್ವನಾಥ ಶಾಸ್ತ್ರಿಗಳು ತುಂಬಾ ಆಗ್ರಹ ಮಾಡಿದ್ದರಿಂದ ನಾವು ಹೋಗಬೇಕಾಯಿತು.

**ಗೋಪಾಳಭಟ್ಟ**—ಅದಕ್ಕೆ ಬರಿಯ ವಿಶ್ವನಾಥ ಭಟ್ಟರ ಸಾಕ್ಷಿಯೊಂದೇ ಏಕೆ? ಇಡೀ ಪಂಢರಪುರವೇ ಅದಕ್ಕೆ ಸಾಕ್ಷಿಯಾಗಿರುವದು. ನಿಮ್ಮ ಸೊಸೆಯು ಪಾಂಡುರಂಗನ ಪಾದಗಳಮೇಲೆ ಪ್ರಾಣಬಿಟ್ಟದ್ದರಿಂದ ದೇವರಿಗೆ ಮೈಲಿಗೆಯಾಯಿತೋ ಅಥವಾ ಇಲ್ಲವೊ ಎನ್ನುವ ನಿರ್ಣಯಕ್ಕಾಗಿ ಕಾಶೀ-ರಾಮೇಶ್ವರ-ಶೃಂಗೇರಿ-ದ್ವಾರಕಾ ಮೊದಲಾದ ಧರ್ಮಸ್ಥಳಗಳಿಗೆ ಪತ್ರಗಳನ್ನು ಕೊಟ್ಟು ಬೇಹುಗಾರರನ್ನು ಕಳಿಸಿವರು ತಾಯೀ—!

**ಭೈರವಭಟ್ಟ**—ವಿಶ್ವನಾಥಭಟ್ಟರು ಮತ್ತು ಅವರ ಹೆಂಡತಿಯು ಇಂದೇ ಪಂಢರಪುರದಿಂದ ಬಂದು, ನಮ್ಮ ಮನೆಯಲ್ಲಿಯೇ ಇಳಿದುಕೊಂಡಿದ್ದಾರೆ. ನಾನು ಈಗಲೇ ಹೋಗಿ ಅವರನ್ನು ಕರೆತರುವೆನು. **(ಹೋಗುವನು)**

**ಚಂಡಿಕಾಬಾಯಿ**—ಅವನೇ ಆ ವಿಶ್ವನಾಥ ಭಟ್ಟನೇ, ಅವನ ಗುಣ ನನಗೆ ಗೊತ್ತಿಲ್ಲದೇ ಇಲ್ಲವೆಂದು ತಿಳಿದಿರುವಿರಾ? ಇದೆಲ್ಲ ಸುಳ್ಳು

ಕಥೆಯನ್ನು ಅವನೇ ಹುಟ್ಟಿಸಿರಲಿಕ್ಕೆಬೇಕು. ಇವನೇ ಒಂದು ಸಲ ನನ್ನ ಸೊಸೆಗೆ ಇಲ್ಲದ್ದೊಂದು ಹೇಳಿ ಅವಳನ್ನು ಓಡಿಸಿಕೊಂಡು ಹೋಗಲು ಸಿದ್ಧನಾಗಿದ್ದನು; ಮತ್ತು ಅರ್ಧದಾರಿಗೂ ಹೋಗಿದ್ದರು; ಆಗ ನಾನು ಮುಂದಾಗಿ ಅವಳನ್ನು ದರದರ ಎಳೆದು ತಂದು ಕತ್ತಲ ಕೋಣೆಯಲ್ಲಿ ಕಟ್ಟಿಹಾಕಿದ್ದೆನು; ಮತ್ತು ಆಗ ಹಾಗೆ ಕಠೋರವಾದೆನೆಂದು ಈಗ ದಾರಿಗೆ ಬಂದಳು; ಮತ್ತು ಬುದ್ಧಿಯೂ ಬಂದಿರುವದು. ಇಂದು ಬೇಡಬೇಡವೆಂದು ನಾವು ಎಷ್ಟು ಹೇಳಿದರೂ ನದಿಗೆ ನೀರು ತರಲು ಹೋದಳು! ಈಗ ಬರುತ್ತಾಳೆ. ನೀವೇ ನೋಡುವಿರಂತೆ—! ಕೈಯಲ್ಲಿಯ ಕಂಕಣಕ್ಕೆ ಕನ್ನಡಿ ಏಕೆ ಬೇಕು?

**ಗದಾಧರಪಂತ**—ಹೌದು ಅವಳು ಈಗ ಬರಬಹುದು; ಆದರೆ ಶಾಸ್ತ್ರಿಗಳು ಹೇಳುವ ಮಾತನ್ನೇ ಇನ್ನೂ ಕೆಲವರ ಮುಖದಿಂದ ಕೇಳಿದ್ದೇನೆ— ಅದು ಸುಳ್ಳೆಂದು ಹೇಗೆ ಅನ್ನಬೇಕು? ಅವರೇನು ಬುದ್ಧಿಶೂನ್ಯರೆ?-

**ಚಂಡಿಕಾಬಾಯಿ**—(ವಸಕ್ಕನೆ ಅವನ ಮೇಲೆ ಹೋಗಿ) ಅವರು ಪಂಡಿತರು— ನೀವು ಅರಣ್ಯಪಂಡಿತರು! ಸಾಕು ಸುಮ್ಮನೇ ಕೂಡಿರಿ!

(ವಿಶ್ವನಾಥ ಭಟ್ಟರು ಬರುತ್ತಾರೆ. ಸಂಗಡ ಗಿರಿಜಾಬಾಯಿ ಮತ್ತು ಭೈರವಭಟ್ಟರೂ ಇದ್ದಾರೆ)

**ಭೈರವಭಟ್ಟ**—ಇದೋ ವಿಶ್ವನಾಥಭಟ್ಟರೇ ನಾವು ಹೇಳುವದು ಸತ್ಯವೇ ಅಥವಾ ಅಸತ್ಯವೇ ಅದನ್ನು ಇವರಿಗೆ ತಿಳಿಸಿ ಹೇಳಿರಿ!—

**ವಿಶ್ವನಾಥಭಟ್ಟ**— ಚಂಡಿಕಾಬಾಯಿಯವರೇ– ಮತ್ತು ಮಾಧವರಾಯರೇ ಇವರು ಹೇಳುವ ಸಮಾಚಾರವು ಅಕ್ಷರಶಹ ಸತ್ಯವಿದೆ. ಮೊದಲೇ ಇವರು ಎಲ್ಲ ಸಂಗತಿಗಳನ್ನು ನಿಮಗೆ ತಿಳಿಸಿರಬಹುದು ಅದನ್ನೇ ನಾನು ಮತ್ತೇಕೆ ಹೇಳಲಿ? ನಿಮ್ಮ ಸೊಸೆಯು ಖಂಡಿತವಾಗಿ ಪುಣ್ಯಶಾಲಿಯು. ಅವಳು ದೇವರ ಪಾದಗಳಮೇಲೆಯೇ ತನ್ನ ಜನ್ಮವನ್ನು ನೀಗಿದಳು. ನಾವೆಲ್ಲ ಕೂಡಿಯೇ ಅವಳ ಪ್ರೇತವನ್ನು ಚಂದ್ರಭಾಗಾ ತೀರಕ್ಕೆ ಒಯ್ದೆವು; ಮತ್ತು ಅಗ್ನಿಸಂಸ್ಕಾರ ಮಾಡಿದೆವು.—

**ಗಿರಿಜಾಬಾಯಿ**—ಮೊದಲಿನಿಂದ ನಿಮ್ಮದು ನಮ್ಮ ಮೇಲೆ ಕೋಪವಿದೆ;

ಆದರೂ ನಾವು ಸತ್ಯವನ್ನೆ ಹೇಳುತ್ತೇವೆ. ಇವರು ಹೇಳುವದೆಲ್ಲ ತೀರಾ ಸತ್ಯವು. ನಿಜವಾಗಿಯೂ ಸಖೂದೇವಿಯು ಪುಣ್ಯಶಾಲಿಯು!

**ಚಂಡಿಕಾಬಾಯಿ**—ಸುಮ್ಮನೆ ಇರು ವೃದ್ಧಳೇ—! ಹಿಂದೆ ನೀನೇ ಅವಳಿಗೆ ಇಲ್ಲದ್ದೊಂದು ಹೇಳಿ, ಓಡಿಸಿಕೊಂಡು ಹೋಗಲು ಸಿದ್ಧಳಾಗಿದ್ದೆ; ಆಗ ನಾನಿದ್ದೆನೆಂದು ಅವಳನ್ನು ಮನೆಗೆ ಎಳೆತಂದೆ. ಸ್ವಲ್ಪ ತಾಳು ಈಗ ನೋಡು. ಅವಳೇ ಬರುವಳು— ನಿನ್ನ ಮೂಗು ಕೊಯ್ಯಲಿಕ್ಕೆ—!

**ಗದಾಧಪಂತ**—ಏನೇ–ಸ್ವಲ್ಪ ನಿದಾನದಿಂದ ಮಾತಾಡು!—

**ಚಂಡಿಕಾಬಾಯಿ**—(ಅಣಕಿಸುತ್ತ) ನಿದಾನದಿಂದ ಮಾತಾಡು ನಿದಾನದಿಂದ ಮಾತಾಡು— ಹೇಗೆ ಮಾತಾಡಬೇಕು ನಿದಾನದಿಂದ—!

**ಪದ್ಮಾವತಿ**—ಇನ್ನು ವರೆಗೂ ಸಖೂದೇವಿಯು ಯಾಕೆ ಬರಲಿಲ್ಲ. (ಆಚೆಗೆ ನೋಡಿ) ಅದೋ ಅಲ್ಲಿ ಯಾರು ಬರುತ್ತಿರುವರು. ಸಖೂದೇವಿಯೇ-ಅಮ್ಮಾ ಇದೇನು ಸಖೂದೇವಿಯು ಮಡಿಶಿರೆಯನ್ನುಟ್ಟುಕೊಂಡು ಬರುತ್ತಿರುವಳು. ಅವಳ ಮೈಮೇಲಿನ ಭರ್ಜರಿ ಪೀತಾಂಬರ ಮತ್ತು ಆಭರಣಗಳೆಲ್ಲಿ ಹೋದವು? ಯಾರಿಗಾದರೂ ಕೊಟ್ಟು ಬಂದಳೆ! ಏನು? ಇವಳು ನಮ್ಮ ಸಖೂದೇವಿಯೋ ಅಥವಾ ಅಲ್ಲವೋ!

(ಸಖೂದೇವಿಯು ಪ್ರವೇಶಿಸುವಳು.)

**ಭೈರವಭಟ್ಟ**—(ಅಂಜುತ್ತ) ಎಲವೊ— ಪಿ–ಪಿ– ಪಿಶಾಚೀ—

**ಚಂದನಭಟ್ಟ**—ಇಲ್ಲಿಯ ಆಶೆಗಳು ತೀರಿಲ್ಲವೆಂದು ಅವಳು ಮತ್ತೆ ಪಿಶಾಚಿಯ ರೂಪದಿಂದ ಇಲ್ಲಿಗೆ ಬಂದಿರುವಳು.

**ಚಂಡಿಕಾಬಾಯಿ**—ಏನೇ–ಏಣ ನಿನ್ನ ಮೈಮೇಲಿನ ಒಡವೆಗಳೇನಾದವು; ಮತ್ತು ಆ ಪೀತಾಂಬರವನ್ನು ಬಿಟ್ಟು ಈ ಮಡೀಶೀರೆಯನ್ನು ಯಾವಾಗ್ಗೆ ಉಟ್ಟುಕೊಂಡೆ?

**ಗದಾಧರಪಂತ**—ಇದೇನು ಚಮತ್ಕಾರವೊ ಆ ಭಗವಂತನೇ ಬಲ್ಲ.

**ಚಂಡಿಕಾಬಾಯಿ**—ಇದೆಲ್ಲ ಆ ಪರಮೇಶ್ವರನಿಗೇ ತಿಳಿದೀತು. ಇವಳು ನಮ್ಮ ಸೊಸೆಯಲ್ಲ, ಬ್ರಹ್ಮರಾಕ್ಷಸಿಯು. ನಾನು ನಿಮಗೆ ಮೊದಲೇ ಹೇಳಲಿಲ್ಲವೆ; ಆದರೆ ನಿಮಗೆಲ್ಲಿ ತಿಳಿಯುವದು?

**ಮಾಧವ**—ಇವಳು ನನ್ನ ಹೆಂಡತಿಯೇನೋ ಹೌದು; ಆದರೆ ಇವಳ ಶೃಂಗಾರ ಸಡಗರಗಳೆಲ್ಲಿ ಹೋದವು ?

**ಸಖೂದೇವಿ**—ಗಿರಿಜಾಬಾಯಿಯವರೇ- ಆಗಲೇ ನೀವು ನನಗೆ- ವಿಠ್ಠಲನಗುಡಿಯ ಹತ್ತಿರ ಭೆಟ್ಟಿಯಾಗಿ, ಈ ಕೊಡವನ್ನು ನನ್ನ ಕೈಯಲ್ಲಿ ಕೊಟ್ಟಿರಿ; ಮತ್ತು ಹೋಗಿಬರುತ್ತೇನೆಂದೂ ಹೇಳಿದಿರಿ; ಆದರೆ ಇಲ್ಲಿಗೆ ಹೇಗೆ ಬಂದಿರಿ?

**ಗಿರಿಜಾಬಾಯಿ**—ಏನು- ನಾನು ನಿನಗೆ ಕೊಟ್ಟೆನೆ! ಸಖೂದೇವೀ ನೀನು-ನಿಶ್ಚಯವಾಗಿಯೂ ಪಿಶಾಚಿಯಾಗಿ ಬಂದಿರುವೆ !-

**ಸಖೂದೇವಿ**—ಹೌದು ಪಿಶಾಚಿಯೇ ನಿಜ; ಯಾಕಂದರೆ, ಒಂದುಸಲ ಕನಸಿನಲ್ಲಿ ಮೃತಳಾಗಿ ತಿರುಗಿ ಜನ್ಮಿಸಿದೆ.

**ಚಂಡಿಕಾಬಾಯಿ**—ಪಿಶಾಚಿಯಲ್ಲ- ಗಿಶಾಚಿಯಲ್ಲ- ಈ ವೃದ್ಧನು ಮತ್ತು ಈ ಮೂವರು ಶಾಸ್ತ್ರಿಗಳು ಕೂಡಿ, ನಮ್ಮ ಮನೆಯಲ್ಲಿಯ ಆಭರಣಗಳನ್ನು ಎಬ್ಬಿಸಬೇಕೆಂದು ಏನಾದರೂ ತ್ರೋಟಕ ಮಾಡಿರಬೇಕು. ಆದೇ ಖಂಡಿತ.

**ಭೈರವಭಟ್ಟ**—(ಅಂಜುತ್ತ) ಅಂ- ಅಂ-- ಎಂಥ ಮಾತಾಡುವಿ ತಾಯೀ--!

**ಮಾಧವ**—ನಾನಂತೂ ಬಹಳ ವಿಚಾರದಲ್ಲಿ ಬಿದ್ದಿರುವೆನು. ಅಮ್ಮಾ ಸ್ವಲ್ಪ ನಿಲ್ಲು. ಇವಳು ಈ ಹಳೇ ಶೀರಿಯನ್ನು ಮತ್ತೆ ವುಟ್ಟುಕೊಳ್ಳಬಾರದೆಂದು, ಅದನ್ನು ನಾನು ಬಚ್ಚಿಟ್ಟಿದ್ದೆನು. ಈಗ ಅದು ಆದೇ ಸ್ಥಳದಲ್ಲಿದೆಯೋ ಅಥವಾ ಇಲ್ಲವೊ, ಎಂಬುದನ್ನು ನೋಡಿಕೊಂಡು ಬರುತ್ತೇನೆ. (ಹೋಗುವನು)

**ಗದಾಧರಪಂತ**—ಶೋಧಮಾಡುತ್ತ ಹೋದ ಹೋದ ಹಾಗೆ, ಎಲ್ಲವೂ ಚಮತ್ಕಾರವೇ ದೃಷ್ಟಿಗೆ ಬೀಳುತ್ತಿವೆ !

**ಚಂಡಿಕಾಬಾಯಿ**—ಸಾಕು ಸಾಕು ನಿಮ್ಮ ವೇದಾಂತ (ಮಾಧವನು ಬರುವನು)

**ಮಾಧವ**—ಅಮ್ಮಾ ಆ ಗಂಟಿನಲ್ಲಿ ಹಳೇ ಶೀರಿಯೇ ಇಲ್ಲ ಹೊಸ ಪೀತಾಂಬರವಿದೆ ಮತ್ತು ಉಳಿದ ಎಲ್ಲ ಆಭರಣಗಳೂ ಇರುತ್ತವೆ. ಇದೋ ನೋಡು ಇದೆಲ್ಲ ಭೂತಾಟಕೆಯೇ ಇರಬೇಕು. ಆಗಲೇ ಇವಳು

ನೀರಿಗೆ ಹೋಗುವಾಗ ಪೀತಾಂಬರವನ್ನುಟ್ಟುಕೊಂಡು ಹೋಗಿದ್ದಳು ಆದರೆ ಈಗ ಹೀಗೆ ಬಂದಳು. ಅಯ್ಯೋ ವಿಧಿಯೇ ಈವರೆಗೂ ನಾನು ವಿಲಾಸಮಾಡಿದ್ದು- ಈ ಪಿಶಾಚಿಯ ಸಂಗಡವೇ ಏನು ?—

**ಭೈರವಭಟ್ಟ**—(ಚಂದನಭಟ್ಟರಿಗೆ) ಸ್ವಾಮೀ ಇದುವರೆಗೂ ನಾನು ಅದು ಹೇಗೋ ಧೈರ್ಯದಿಂದ ಇದ್ದೆನು; ಇನ್ನುಮುಂದೆ ಮಾತ್ರ ಆ ಧೈರ್ಯವಿಲ್ಲ. ಹೂ ಚಂದನಶಾಸ್ತ್ರಿಗಳೇ "ಯಃಪಲಾಯಃ ಸಜೀವತೀ"!

**ಚಂದನಭಟ್ಟ**—ನಾನೂ ಅದೇ ಹಂಚಿಕೆಯಲ್ಲಿಯೇ ಇದ್ದೆ; ಇನ್ನು ವೇಳೆ ಕಳೆದು ಉಪಯೋಗವಿಲ್ಲ. ಹೂ- ನಡೆಯಿರಿ- ಜೈ ರಘುವೀರ—!

ಹೋಗುವರು

**ಸಖೂದೇವಿ**—ಗಿರಿಜಾಬಾಯಿಯವರೇ ಕತ್ತಲಮನೆಯಲ್ಲಿ ನೀವು ನನಗೆ ಭೆಟ್ಟಿಯಾಗಿ, ನನ್ನ ಬಂಧನವನ್ನು ಬಿಡಿಸಿ, ನನ್ನ ಜೊತೆಗೆ ಮನುಷ್ಯನನ್ನು ಕೊಟ್ಟು, ನನ್ನನ್ನು ಪಂಢರಪುರಕ್ಕೆ ಕಳಿಸಿದಿರಿ; ಆದರೆ ಈಗಲ್ಲಿಗೆ ಹೇಗೆ ಬಂದಿರಿ ?

**ಗಿರಿಜಾಬಾಯಿ**—ಯಾರು- ನಾನೇ ಸಖೂದೇವೀ ಎಂಥ ವಿಲಕ್ಷಣ ಸುದ್ದಿಯನ್ನು ಹೇಳುವಿಯಲ್ಲ? ಪಂಢರಪುರದಲ್ಲಿ ನಿನ್ನ ಭೆಟ್ಟಿಯಾದಾಗ ನೀನು ಹೇಗೆ ಬಂದೆ ಎಂದು ನಾನೇ ನಿನ್ನನ್ನು ಕೇಳಲಿಲ್ಲವೆ ?— ಇದೋ ಚಂಡಿಕಾಬಾಯಿಯವರೇ—ನಾವು ಪಾಂಡುರಂಗನ ಭಕ್ತರು. ಪಿಶಾಚಿಗಳ ಭಯ ನಮಗಿಲ್ಲ. ನಿಮ್ಮ ಮನೆಯೊಳಗಿನ ಒಡವೆಗಳನ್ನು ಅಪಹರಿಸಬೇಕೆಂದು ನಾವು ಹಂಚಿಕೆ ಮಾಡಿದ್ದೇವೆಂದು ನಿಮ್ಮ ಕಲ್ಪನೆಯಾಗಿತ್ತು; ಆದರೆ ಈಗ ನಿಮ್ಮ ಒಡವೆಗಳು ನಿಮ್ಮ ಮನೆಯಲ್ಲಿಯೇ ಇರುತ್ತವೆ; ಅಂದಮೇಲೆ ಆ ದೋಷವಂತೂ ನಮ್ಮ ತಲೆಯಮೇಲಿಲ್ಲ. ಇನ್ನು ನಮ್ಮನಿಮ್ಮಲ್ಲಿ ಭೇದಬರುವ ಮಾತುಗಳೆಂದರೆ, ನೀವು, ಸಖೂದೇವಿಯು ಇಲ್ಲಿಯೇ ಇದ್ದಳೆಂದು ಹೇಳುತ್ತೀರಿ; ನಾವು, ಅವಳೂ ಪಂಢರಪುರಕ್ಕೆ ಬಂದಿದ್ದಳೆಂದು ಅನ್ನುತ್ತೇವೆ; ಇಷ್ಟೇ ನಮ್ಮನಿಮ್ಮೊಳಗಿನ ವಾಗ್ವಾದ! ತಿಳಿಯಿತೋ-!

**ಮಾಧವ**—ಇದ್ದಳಮ್ಮಾ ಖಂಡಿತವಾಗಿ ಇದ್ದಳು. ಈ ನಡುವೆ ನಾವು-ಇವಳನ್ನು ನೀರಿಗೆ ಹೋಗಲು ಬಿಡುತ್ತಿರಲಿಲ್ಲ; ಇಂದು ತೀರ ಹಟ ಮಾಡಿದಳು; ಆಗಲಿ ಎಂದೆವು; ಹೋಗುವಾಗ್ಗೆ ಹೇಗೆ ಹೋಗಿದ್ದಳೋ ಹಾಗೆ ತಿರುಗಿ ಬರಲಿಲ್ಲ; ಆದರೆ ನನಗಿಷ್ಟೇ ಸಂಶಯ, ನೀರಿಗೆ ಹೋದವಳು ಪಿಶಾಚಿಯೋ ಅಥವಾ ಇದೋ ಈಗ ತಿರುಗಿ ಬಂದ ಇವಳು ಪಿಶಾಚಿಯೋ—; ಅಥವಾ ಇಬ್ಬರೂ ಪಿಶಾಚಿಗಳೋ! ಇದೊ ನೋಡಿರಿ, ಇವಳ ಪಾದಗಳನ್ನು— ಇವು ಕೂಡ ನಮ್ಮಂತೆ ಇರುತ್ತವಲ್ಲವೆ? ಪಿಶಾಚಿಗಳನ್ನು ನೋಡಿದರೆ ನಮಗೆ ಭಯವಾಗುವದಿಲ್ಲವೆ?—

**ಗಿರಿಜಾಬಾಯಿ**—ಮತ್ತು ಹೇಳುತ್ತಾಳೆ, ವಿಠ್ಠಲನ ಗುಡಿಯ ಹತ್ತಿರ ನಾನೇನೋ ಇವಳಿಗೆ—ಕೊಡ ಕೊಟ್ಟೆನಂತೆ! ನಾವು ಪಂಢರಪುರದಿಂದ ಬಂದನಂತರ ಭೆಟ್ಟಿಯಾದದ್ದು ಇದೇ ಮೊದಲು—!

**ಚಂಡಿಕಾಬಾಯಿ**—ಮಾಧವಾ ನೀನು ಈಗ ಇಲ್ಲದ ವಿಚಾರ ಮಾಡಬೇಡ; ಮೊದಲು ಇವಳನ್ನು ಮೊದಲಿನಂತೆ ಆ ಕತ್ತಲು ಕೋಣೆಯಲ್ಲಿ ಕಟ್ಟಿಹಾಕು!

**ಮಾಧವ**—ಹೌದು ಹಾಗೇ ಮಾಡೋಣ!—

**ವಿಶ್ವನಾಥಭಟ್ಟ**—ಮಾಧವರಾಯರೇ ಮತ್ತು ಚಂಡಿಕಾಬಾಯಿಯವರೆ—ಈಗ ನನಗೆ ಈ ಎಲ್ಲ ಸಂಗತಿಗಳೊಳಗಿನ ಗೂಢ ಅರ್ಥವು ಚನ್ನಾಗಿ ಹೊಳೆದಿದೆ. ಇದೆಲ್ಲ ಆ ಪಾಂಡುರಂಗನ ಲೀಲೆಯು. ಆ ಭಗವಂತನು ನಿಮ್ಮ ಹೆಂಡತಿಯ ರೂಪಧರಿಸಿ ಇಲ್ಲಿ ಆವನು ನಿಮ್ಮೊಡನೇ ಬಾಳುವೆ ಮಾಡಿದನು; ಮತ್ತು ಈ ಸಖೂದೇವಿಯನ್ನು ಪಂಢರಪುರಕ್ಕೆ ಕಳಿಸಿದನು. ಸಖೂದೇವೀ ನಿನ್ನ ಭಕ್ತಿಗೆ ಬೇರೆ ಉದಾಹರಣೆಯೇ ಇಲ್ಲ. ನಿನ್ನ ಪುಣ್ಯಫಲದಿಂದಲೆ ನಮ್ಮಂಥ ಪಾಮರರು ಉದ್ಧಾರವಾಗಬೇಕು; ಆದ್ದರಿಂದ ನೀನೇ ಆ ಭಗವಂತನನ್ನು ಮೊರೆಹೋಗಿ, ನಮೆಲ್ಲರಿಗೂ ಆವನ ಸಂದರ್ಶನವನು ಮಾಡಿಸು: ಮತ್ತು ಈ ಪಾಪಿಗಳನ್ನು ಕೃತಾರ್ಥರನ್ನಾಗಿ ಮಾಡು; ಇಷ್ಟೇ ನಾವೆಲ್ಲ ನಿನ್ನನ್ನು ಬೇಡಿಕೊಳ್ಳುವೆವು.

**ಸಖೂದೇವಿ**—(ಆರ್ತಳಾಗಿ) ದೇವಾ— ನೀನು ನನ್ನ ರೂಪವನ್ನು ಧರಿಸಿ— ನನ್ನ ಕಷ್ಟದ ಭಾರವನ್ನು ಹೊತ್ತು— ನಮ್ಮ ಮನೆಯಲ್ಲಿ ಆಳಾಗಿ ದುಡಿದೆಯಾ ?—

ರಾಗ ಪಹಡಿ, ತಾಳ ಕೇರವಾ

**ಬಾರಯ್ಯಾ ಗೋವಿಂದಾ ಕಾಯೋ । ಯದುರಾಯಾ ತರುಣಿಗೆ ತ್ವರಿತದಿ । ತೋರು ರೂಪವ ॥ ಪಲ್ಲ ॥ ನಾ ಭೀತಳಾದೆ । ಬಾ ಭೋಗಿತಲ್ಪಾ ಹೇ ಭೂಭಾರೋದ್ಧರಣಾ॥೧॥**

ರಘುವೀರವಲ್ಲಭಾ ನಿನ್ನ ದಿವ್ಯ ರೂಪವನ್ನು ತೋರಿಸಿ ನನ್ನನ್ನು ಸಂತೋಷಗೊಳಿಸು!—

ರಾಗ ಪೀಲು, ತಾಳ ಕೇರವಾ

**ಶ್ರೀಧವಾ ವಾಸುದೇವಾ ಬಾ ಕೇಶವಾ ॥ ಪೆಣ್ಮಣಿಯಾಗಿ । ಹೀನ ಮನುಜರ । ದೀನಳಾ ಸೇವಕದೆ । ಎನ್ನ ಗೋಸುಗ ಮಾನವ ತೊಲಗಿ । ಕಷ್ಟವೆಂತುಸಹಿಸಿದೆಯೊ ದೇವಾ॥ ೧ ॥ ಕಷ್ಟವಾಯಿತೋ । ವಿಠ್ಠಲರಾಯ । ಎಲ್ಲಿ ಕಾಣಲಿ ನಿನ್ನ । ಪೆಟ್ಟು ತಾಗಿತೋ ಕೋಮಲಕರಕೆ । ಕಷ್ಟವೆಂತು ಸಹಿಸಿದೆಯೋ ದೇವಾ ॥ ೨ ॥**

(ಒಳಗಣಿಂದ ಅಶರೀರವಾಣಿಯಾಗುವದು—“ಮಾಧವರಾಯಾ— ಚಂಡಿಕಾಬಾಯಿ ಯುವತೀ— ನಾನೇ ನಿಮ್ಮ ಮನೆಯಲ್ಲಿ ಸಖೂದೇವಿಯ ರೂಪದಿಂದ ಕೆಲಸ ಮಾಡಿದೆನು”)

**ಮಾಧವ**— ಇದೇನು ಅಶರೀರವಾಣಿಯು—!

**ಚಂಡಿಕಾಬಾಯಿ**— ಸಖೂದೇವೀ ನಿನ್ನ ಯೋಗ್ಯತೆ ತಿಳಿಯದೇ ನಿನ್ನನ್ನು ಪರಿಪರಿಯಾಗಿ ಪೀಡಿಸಿದೆನು ನನ್ನ ಅಪರಾಧಗಳನ್ನು ಮನ್ನಿಸು.

(ಅವಳ ಪಾದಗಳಿಗೆ ಎರಗುವಳು)

**ಮಂಗಳಂ**

ಪದ—ಕೋರಸ್

**ದುರಿತಹರಣ ಶರಧಿಶಯನ ಪರಮಪಾವನಾ ॥ ಶ್ರೀಸುಜನಜೀವನಾ ॥ ಪಲ್ಲ ॥ ನಿಗಮಾಗಮ ಗಮ್ಯಚರಿತ । ಸರಸೀರುಹಲೋಚನಾ । ಜಗದಾ ಭರಣಾ । ಲಕುಮೀ । ಹೃದಯ । ಭೂಷಣಾ । ಕೌಸಲನಂದನಾ ॥ ೧ ॥**

## ಸಮಾಪ್ತ

# ವೈ. ವಾಮನರಾವ ಮಾಸ್ತರರ ನಾಟಕಗಳು

**ವೀರ ಅಭಿಮನ್ಯು—** ೧—೮—೦

ಮಹಾಭಾರತದಲ್ಲಿಯ ಉಜ್ವಲ ನಾಯಕನ ದಿವ್ಯ ಜೀವನವನ್ನು ಚಿತ್ರಿಸಿದ ನಾಟ್ಯ ರಚನೆಯಿದು. ಉತ್ತರೆಯ ಕರುಣೆ, ಅಭಿಮನ್ಯುವಿನ ವೀರ, ದುರ್ಯೋಧನನ ಛಲ, ಕರ್ಣನ ಕಾಪಟ್ಯ, ಸುಭದ್ರೆಯ ಶೋಕ, ದ್ರೋಣನ ಅಸಹಾಯತೆಗಳನ್ನು ಆವೇಶದಿಂದ ವ್ಯಕ್ತಪಡಿಸಿದ ರಮ್ಯ ನಾಟಕ. ಈಗಾಗಲೇ ಇದು ನಾಲ್ಕು ಆವೃತ್ತಿಯನ್ನು ಕಂಡಿದೆ.

**ಪಾರ್ವತೀ ಸತ್ವಪರೀಕ್ಷೆ—** ೧—೮—೦

ಇದೊಂದು ಶಿವಲೀಲಾಮೃತದಿಂದ ಆಯ್ದುಕೊಂಡ ಕಥಾನಕ. ಮಹಾನಂದೀ ಕ್ಷೇತ್ರದ ಕಥೆಯೇ ಇದರ ವಸ್ತು. ಸಾಮಾನ್ಯವಾದ ಸವತಿಯರಂತೆ ತಂಟೆ ಮಾಡಿದ ಗಿರಿಜಾದೇವಿ, ಗಂಗಾದೇವಿಯರಿಗೆ ಪರಶಿವನು ಶಾಪಕೊಡುವನು. ಅವರು ವೇಶ್ಯೆಯರಾಗಿ ಈ ಭೂತಲದಲ್ಲಿ ಜನ್ಮಿಸುವರು. ದೇವೇಂದ್ರನು ಪಾಪದ ಕಣ್ಣಿನಿಂದ ದಾಕ್ಷಾಯಣೀ ದೇವಿಯನ್ನು ಬಯಸುವನು; ಅದಕ್ಕೆ ಯೋಗ್ಯ ಶಾಸನವು ಅವನಿಗುಂಟಾಗುವದು. ಕೊನೆಗೆ ಪರಶಿವನೇ ಲೋಕಮಾತೆಯ ಸತ್ವಪರೀಕ್ಷೆ ಮಾಡಿ- ಉದ್ಧರಿಸುವನು. ಕನ್ನಡ ರಂಗಭೂಮಿಯ ಮೇಲೆ ಹೆಸರಾದ ನಾಟಕವಿದು

**ದ್ರೌಪತಿ ವಸ್ತ್ರಾಪಹರಣ—** ೧—೮—೦

ಚಿರಪರಿಚಿತವಾದ ಕಥಾವಸ್ತುವಿದು; ಆದರೆ ರಚನೆಯಲ್ಲಿ ತುಂಬ ಆವೇಶಪೂರ್ಣವಾದದ್ದು. ಭೀಮನ ವೀರ, ದ್ರೌಪತಿಯ ಚಾಣಾಕ್ಷತನದ ರಾಜಕಾರಣಪಟುತ್ವ ಇವೇ ಮೊದಲಾದ ಗುಣಗಳನ್ನು ಎದ್ದು ತೋರಿಸುವ ಧೀರೋದಾತ್ತ ವಿಷಾದಂತನಾಟಕ—

**ಸಂದೇಹ ಸಾಮ್ರಾಜ್ಯ—** ೧—೮—೦

ಬಾಳನ್ನೇ ಆವರಿಸಿದ ಸಂಶಯ ಸ್ವಭಾವದ ವಿವಿಧ ಜನರ ಚಿತ್ರಶಾಲೆಯಂತೆ ಈ ನಾಟಕ. ಪ್ರವೇಶ-ಪ್ರವೇಶಕ್ಕೂ ಹಾಸ್ಯದ ಹೊಳೆಯನ್ನು ಹರಿಸುವಂಥ ಸನ್ನಿವೇಶಗಳು. ಅಲ್ಲಲ್ಲಿ ಶ್ರಂಗಾರ ರಸದ ವರತೆಗಳು. ಸೂತ್ರಬದ್ಧ ನಾಟಕದ ಮಾದರಿ ಇದೊಂದು—

ಸ್ವ. ಶಾ. ನಾರಾಯಣರಾವಮಠಶಾಸ್ತ್ರಿರ ಕೃತಿ

# ನಮ್ಮಲ್ಲಿ ದೊರೆಯುವ ಪುಸ್ತಕಗಳು

೧) ವೀರ ಅಭಿಮನ್ಯು ೧-೮-೦
೨) ಪಾರ್ವತೀ ಸತ್ವಪರೀಕ್ಷೆ ೧-೮-೦
೩) ಸಂದೇಹ ಸಾಮ್ರಾಜ್ಯ ೧-೮-೦
೪) ದ್ರೌಪತೀ ವಸ್ತ್ರಾಹರಣ ೧-೮-೦
೫) ಕೃಷ್ಣಾರ್ಜುನರ ಯುದ್ಧ ೧-೮-೦
೬) ಸಾಧ್ವೀ ಸಖೂಬಾಯಿ ೧-೮-೦
೭) ಎರಡನೆ ಬಾಜೀರಾವ ಪೇಶವೆ ೧-೮-೦
೮) ಭಕ್ತ ಪ್ರಲ್ಹಾದ— ೧-೮-೦
೯) ಭಕ್ತ ಪುಂಡಲೀಕ ೧-೮-೦

**ಪುಸ್ತಕಗಳು ದೊರೆಯುವ ಸ್ಥಳ**

ಶಿ. ಶಾ. ಸವಣೂರ

**ಮೊಣಸಿನಕಾಯಿಗಲ್ಲಿ**

**ಧಾರವಾಡ**